ನವೋದಯ ಪ್ರಚಾರ ಪುಸ್ತಕಮಾಲೆ—೧೬

# ಹುರುಳಿ ಭೀಮರಾವ್

ಬೈಕಾಡಿ ವೆಂಕಟಕೃಷ್ಣರಾಯ



ಮಹಾತ್ಮಾ ಗಾಂಧಿ
ಮೆಮೋರಿಯಲ್ ಕಾಲೇಜು
ಉಡುಪಿ 2

ನವೋದಯ ಪ್ರಚಾರ ಪುಸ್ತಕ ಮಾಲೆ-೧೬

# ಹುರುಳಿ ಭೀಮರಾವ್

ಬೈಕಾಡಿ ವೆಂಕಟಕೃಷ್ಣರಾಯ



ಮಹಾತ್ಮಾ ಗಾಂಧೀ ಮೆಮೋರಿಯಲ್ ಕಾಲೇಜು
ಉಡುಪಿ—೨.

## ಸಂಪಾದಕ ಮಂಡಳಿ

ಪ್ರೊ| ಕು. ಶಿ. ಹರಿದಾಸ ಭಟ್ಟ, ಎಂ. ಎ., ಪ್ರಧಾನ ಸಂಪಾದಕ.
ಶ್ರೀ ಎಸ್. ಕೆ. ಶ್ರೀಪತಿ ಆಚಾರ್ಯ, ಎಂ. ಎ., ವಿದ್ವಾನ್.
ಶ್ರೀ ಎನ್. ತಿರುಮಲೇಶ್ವರ ಭಟ್ಟ, ಎಂ. ಎ.



ಮೊದಲನೆಯ ಮುದ್ರಣ ೧೯೭೧



ಬೆಲೆ : [illegible]

ಮುದ್ರಕರು : ಕೆ. ಹೊನ್ನಯ್ಯ ಶೆಟ್ಟಿ
ನವಯುಗ ಪ್ರೆಸ್, ಉಡುಪಿ.

# ನವೋದಯ ಪ್ರಚಾರ—ಇಂದು

ನಮ್ಮ ನವೋದಯ ಪ್ರಚಾರ ಪುಸ್ತಕ ಮಾಲೆ ಕಾಲೇಜಿನ ವಾರ್ಷಿಕ ಸಾಹಿತ್ಯೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣಗಳನ್ನು ಮಾತ್ರವೇ ಅಲ್ಲದೆ ಕನ್ನಡ ಸಾಹಿತಿ-ಕಲಾವಿದರ ಕುರಿತು ಲಿಖಿತ ಪ್ರಬಂಧಗಳನ್ನೂ ಪ್ರಕಟಿಸಲು ತೊಡಗಿ ಹದಿನೈದು ವರ್ಷಗಳಾದುವು. 'ಲಾಭ ಬೇಡ, ನಷ್ಟವಿಲ್ಲ' ಎಂಬ ಆರ್ಥಿಕ ತಳಹದಿಯಲ್ಲಿ ಕಾಲೇಜು ಕೈಗೊಂಡ ಈ ಪ್ರಕಟನ ಸಾಹಸಕ್ಕೆ ಕನ್ನಡಿಗರು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ.

ಪ್ರಕಟನೆಯ ಬಗ್ಗೆ ನಾವು ಯಾವ ನಿಯಮಿತತೆಯನ್ನೂ ಇಟ್ಟುಕೊಂಡಿಲ್ಲವಾದರೂ ಇದುವರೆಗೆ ಸುಮಾರು ಹದಿನೈದು ಪುಸ್ತಕಗಳು ಅಚ್ಚಾಗಿವೆ. ಅದರಲ್ಲಿ ಎಷ್ಟೋ ತೀರಿವೆ. ಮುಂಬರುವ ಜಿಲ್ಲಾ ಸಾಹಿತ್ಯ ಸಮ್ಮೇಳನದ ನೆಪದಲ್ಲಿ ಮತ್ತೊಮ್ಮೆ ಈ ಜಿಲ್ಲೆ ಕನ್ನಡ ನಾಡಿನ ಸೇವೆಗೆ ಅಣಿಗೊಳಿಸಿದ ಮಹನೀಯರ ಪರಿಚಯವನ್ನು ಪ್ರಾಂಕ್ತವಾಗಿ ಪ್ರಕಟಿಸಬೇಕೆಂಬ ನಮ್ಮ ಆಶಯ ದೊಡ್ಡದೆ. ಹಲವು ಮಂದಿ ಲೇಖಕರು ಇದರಲ್ಲಿ ಸಹಕರಿಸಿದ್ದಾರೆ. ಇದುವರೆಗೆ ಪ್ರಕಟಿತವಾದ (ಮರುಪ್ರಕಟಿತವಾದ) ಗೋವಿಂದ ಪೈ, ಕಡೆಂಗೋಡ್ಲು, ಸೇಡಿಯಾಪು, ಕಾರಂತ ಅವರ ಜತೆಗೆ ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶ ರಾವ್, ಹುರುಳಿ ಭೀಮರಾವ್, ಉಗ್ರಾಣ ಮಂಗೇಶ ರಾವ್, ಎಸ್ ವೆಂಕಟರಾಜ, ಕಯ್ಯಾರ ಕಿಞ್ಞಣ್ಣ ರೈ, ಅವರನ್ನೂ

ಪೋಣಿಸಿದ ಬಳಿಕ ಜಿಲ್ಲೆಯ ಸಾಹಿತ್ಯ ವ್ಯವಸಾಯದ ಒಂದು ಸಮಗ್ರ ಚಿತ್ರ ಮೂಡುವುದೆಂದು ನಾವು ಆಶಿಸಿದ್ದೇವೆ.

ಪುಸ್ತಕ ಪ್ರಕಟನೆಯ ಲೇಖಕರು ಮಾಲೆಯ ಇತಿಮಿತಿ ಮತ್ತು ನಿಯಮಿತ ಅವಧಿಯೊಳಗೇನೆ ತಮ್ಮ ಕೃತಿಯನ್ನು ರಚಿಸಿ ಉಪಕರಿಸಿದ್ದಾರೆ. ಅವರಿಗೂ, ಸುಂದರವಾಗಿ ಮುದ್ರಿಸಿಕೊಟ್ಟ **ನವಯುಗ ಪ್ರೆಸ್**, ಅವರಿಗೂ ನಮ್ಮ ಕೃತಜ್ಞತೆ.

ಸಪ್ಟೆಂಬರ–18, 1971 **ಕು. ಶಿ. ಹರಿದಾಸ ಭಟ್ಟ**

ಪ್ರಧಾನ ಸಂಪಾದಕ

# ಮುನ್ನುಡಿ

ದಿ| ಹುರುಳಿ ಭೀಮರಾಯರ ಕುರಿತು ಒಂದು ಕಿರು ಹೊತ್ತಗೆ ಬರೆದುಕೊಡಬೇಕೆಂದು ನನ್ನ ಆತ್ಮೀಯ ಮಿತ್ರರಾದ ಶ್ರೀ ಕು. ಶಿ. ಹರಿದಾಸ ಭಟ್ಟರು ನನ್ನನ್ನು ಕೇಳಿದಾಗ, ಅದಕ್ಕೆ ನಾನು ಅರ್ಹನೇ ಅಲ್ಲವೇ ಎಂಬ ಯಾವ ಯೋಚನೆಗೂ ಎಡೆ ಕೊಡದೆ, ನನಗೆ ಅಭ್ಯಾಸಕ್ಕೆ ಇದೊಂದು ಅವಕಾಶ ಎಂದೆಣಿಸಿ ಮುನ್ನುಗ್ಗಿದ್ದೇನೆ.

ಶ್ರೀ ಭೀಮರಾಯರು ಈಗ ನಮ್ಮ ಮುಂದಿಲ್ಲದಿರುವಾಗ, ಅವರ ಒಡನಾಡಿಗಳಲ್ಲೂ ಹಲವರು ಈಗ ಇಲ್ಲದಾಗಿದ್ದು ಅವರ ಜೀವನದ—ವ್ಯಕ್ತಿತ್ವದ–ಕುರಿತು ವಿವರ ಸಂಗ್ರಹಿಸುವುದು ನನಗಿದ್ದ ಸ್ವಲ್ಪ ಸಮಯದ ಅವಕಾಶದಲ್ಲಿ ಕಷ್ಟವೇ ಆಯಿತು. ಆದರೂ ನನ್ನ ಮಿತಿಗೆ ಒಳಪಟ್ಟಂತೆ ಅವರ ಕುರಿತು ನಾನು ಬರೆಯಬೇಕಾದ ಬಗೆಗೆ ಮಾಹಿತಿಗಳನ್ನು ಸಂಗ್ರಹಿಸಿದ್ದೇನೆ.

ಭೀಮರಾಯರ ಮಕ್ಕಳು, ಶ್ರೀ ರಾಮಚಂದ್ರ, ಶ್ರೀ ಸುಧಾಕರ ತಮ್ಮಲ್ಲಿದ್ದ ಸಾಹಿತ್ಯಗಳನ್ನು ನನಗೆ ಒದಗಿಸಿದ್ದಾರೆ. ತಮಗೆ ತಿಳಿದ ವಿವರ ಹೇಳಿದ್ದಾರೆ. ಶ್ರೀ ದಾಮೋದರ ಬಾಳಿಗರು ಇನ್ನಷ್ಟು ವಿವರ ಒದಗಿಸಿದರು. ಶ್ರೀ ಹುರುಳಿ ಕೃಷ್ಣರಾಯರಿಂದ ಅವರ ಕುಟುಂಬದ ವಿವರ ತಿಳಿದಿದ್ದೇನೆ. ಗೆಳೆಯ ಶ್ರೀ ಎಚ್. ಸುಬ್ಬಣ್ಣ ಭಟ್ಟರು ಭೀಮರಾಯರ ಎರಡು ಕೃತಿಗಳನ್ನು ನನ

ಗಾಗಿ ಓದಿ ಕೊಟ್ಟರು. ನನ್ನ ಹೊರೆ ಇಳಿಸಲು ಸಹಾಯ ಮಾಡಿದ ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ.

ಇಲ್ಲಿ ಭೀಮರಾಯರ ಕುರಿತು ನಾನೇ ಏನಾದರೂ ಹೇಳಿದೆ ಎನ್ನುವುದಕ್ಕಿಂತ ಅವರ ಕೃತಿಗಳಿಂದ ಆಯ್ದ ಭಾಗಗಳನ್ನೇ ತಮ್ಮ ಮುಂದಿಟ್ಟು ಭೀಮರಾಯರು ಎಂದರೆ ಹೀಗೆ ಎಂದು ವರದಿಸಿದ್ದೇನೆ ಎನ್ನುವುದು ಸರಿಯಾದೀತು.

ಕೃತಿರೂಪದಲ್ಲಿಯಾದರೆ ಇದು ನನ್ನ ಎರಡನೆ ಶಿಶು. ನನ್ನ ಮೊದಲನೆ ಕೃತಿ "ಬಯಲಾಟದ ಕಥೆ" 1963ರಲ್ಲಿ ಮೈಸೂರು ವಯಸ್ಕರ ಶಿಕ್ಷಣ ಸಮಿತಿಯವರಿಂದ ಪ್ರಕಟಿಸಲ್ಪಟ್ಟಿತು.

ಬಿಡಿ ಲೇಖನಗಳಲ್ಲೇ ತೃಪ್ತಿ ಹೊಂದಿದ್ದ ನನ್ನಿಂದ ಈ ಬರೆಹವನ್ನು ಬರೆಯಿಸಿ ಥಕ್ಕನೆ ನನ್ನನ್ನು ಸಾಹಿತಿಯಾಗಿ ಮಾಡಲು ಯತ್ನಿಸಿದ ಶ್ರೀ ಕು. ಶಿ. ಹರಿದಾಸ ಭಟ್ಟರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ನನ್ನ ಈ ಕೃತಿಯನ್ನು ಪ್ರಕಟಿಸುವ "ನವೋದಯ ಪ್ರಚಾರ ಪುಸ್ತಕ ಮಾಲೆ"ಯ ಎಲ್ಲ ಅಧಿಕಾರಿಗಳಿಗೂ ಕೃತಜ್ಞನಾಗಿದ್ದೇನೆ.

ಬ್ರಹ್ಮಾವರ, ಬೈಕಾಡಿ ವೆಂಕಟಕೃಷ್ಣರಾಯ
4—9—1971

# ಶ್ರೀ ಹುರುಳಿ ಭೀಮರಾಯರು

— ೧ —

ಹೆಸರಿಗೆ ತೀರ ವಿರೋಧವಾದ ಕೃಶ ಶರೀರವನ್ನು ಹೊತ್ತಿದ್ದ, ಆದರೆ ಅಧ್ಯಾಪಕನಾಗಿ, ಪತ್ರಿಕೋದ್ಯಮಿಯಾಗಿ, ಕಲೆಗಾರನಾಗಿ, ಸಾಹಿತಿಯಾಗಿ, ನಾಡನುಡಿಯ ಅನನ್ಯ ಭಕ್ತನಾಗಿ, ಎಲ್ಲದಕ್ಕಿಂತ ಮುಖ್ಯವಾಗಿ ಅಸತ್ಯಕ್ಕೆ ತಲೆಬಾಗದ, ಅನ್ಯಾಯವನ್ನು ವ್ಯಂಗ್ಯವಾಗಿ ನಗೆಯಾಡುವ ನಿರ್ದಾಕ್ಷಿಣ್ಯ ಮೂರ್ತಿ —ತನ್ನ ಬದುಕಿನ ಕಾಲದಲ್ಲಿ ಭೀಮನಂತಹ ಕಾರ್ಯವೆಸಗಿ ಭೀಮನಂತೆಯೇ ಅಜೇಯನಾಗಿ ಬಾಳಿದ– ಹಿರಿಯ ಜೀವ, ಹುರುಳಿ ಭೀಮರಾಯರು.

ಭೀಮರಾಯರನ್ನು ನಾನು ಮೊದಲು ಕಂಡದ್ದು ೧೯೪೪ರಲ್ಲಿ. ಆಗ ನಾನು ಬೆಂಗಳೂರಲ್ಲಿದ್ದೆ. ಕನ್ನಡ ಸಾಹಿತ್ಯ ಪರಿಷತ್ತಿನ ಆಗಿನ ಉಪಾಧ್ಯಕ್ಷರಾಗಿದ್ದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರನ್ನು ಈ ಜಿಲ್ಲೆಯ ಆದ್ಯಂತ ಸುತ್ತಿಸಿ ಪರಿಷತ್ತಿನ ಪ್ರಚಾರ ಮಾಡಿಸಬೇಕೆಂಬುದು ಆಗಿನ ನನ್ನ ಉದ್ದಿಶ್ಯವಾಗಿತ್ತು. ಈ ಕಾರಣದಿಂದಾಗಿ ಶ್ರೀಮಾಸ್ತಿಯವರೂ, ನಾನೂ, ಪರಿಷತ್ತಿನ ಕಾರ್ಯದರ್ಶಿಗಳಾಗಿದ್ದ ಶ್ರೀ ಕ. ವೆಂ. ರಾಘವಾಚಾರ್ಯರೂ ಪ್ರಾಯಶಃ ೧೯೪೪ರ ನಾಡ ಹಬ್ಬದ ಕಾಲದಲ್ಲಿ ಈ ಜಿಲ್ಲೆಯ ಪ್ರವಾಸದಲ್ಲಿದ್ದಾಗ ದಿ| ಕಡೆಕಾರ್ ರಾಜಗೋಪಾಲ ಕೃಷ್ಣರಾಯರ ಸಾರಥಿತ್ವದಲ್ಲಿ ಮುನ್ನಡೆಯುತ್ತಿದ್ದ ಉಡುಪಿ ಕರ್ಣಾಟಕ ಸಂಘದ ಆಶ್ರಯದಲ್ಲಿ ಒಂದು ಕಾರ್ಯಕ್ರಮದಲ್ಲಿ ಮಾಸ್ತಿ

ಯವರು ಭಾಗವಹಿಸಿದ್ದರು. ಅದು ಕವಿ ಮುದ್ದಣನ ಭಾವ ಚಿತ್ರಾವರಣ. ಆ ಸಂದರ್ಭದಲ್ಲಿ ಶ್ರೀ ಭೀಮರಾಯರೂ ಶ್ರೀ ರಾಜಗೋಪಾಲ ಕೃಷ್ಣರಾಯರ ಜತೆಯಲ್ಲಿದ್ದುದೂ, ಕೆಲಸ ಮಾಡುತ್ತಿದ್ದುದೂ ನೋಡಿದ್ದ ನೆನಪು—

ತದನಂತರ ಅವರನ್ನು ನಾನು ನೋಡಿದ್ದು ೧೯೪೭ರ ಡಿಸೆಂಬರ್‌ನಲ್ಲಿ, ಕಾಸರಗೋಡಿನಲ್ಲಿ- ಸಾಹಿತ್ಯ ಸಮ್ಮೇಳನದ ಕಾಲದಲ್ಲಿ. ಸ್ವಾಗತ ಸಮಿತಿ ಸದಸ್ಯರಾಗಿ ಶ್ರೀ ಭೀಮ ರಾಯರು ಕಾಸರಗೋಡು ಸಮ್ಮೇಳನದಲ್ಲಿ ಪ್ರಮುಖ ಪಾತ್ರ ವನ್ನು ವಹಿಸಿದ್ದರು. ನಾವಿಬ್ಬರೂ ಒಟ್ಟಿಗೆ ದುಡಿಯುವ ಅವಕಾಶ ಆಗ ನನಗೆ ಒದಗಿತ್ತು.

ಈ ಬಡಕಲು ದೇಹದ "ಭೀಮ" ಸ್ವಾಗತ ಸಮಿತಿಯ ಪರವಾದ ಅಡುಗೆಮನೆಯ ಉಸ್ತುವಾರರು. "ನಿಮಗೆಲ್ಲ ಪಥ್ಯ ಹಾಕುವವನು ನಾನು ತಿಳಿಯಿತೇ" ಎಂದಾಗ ನಾವು ಕಾಸರ ಗೋಡಿಸಿಂದ ಹಿಂತಿರುಗುವಾಗ ಭೀಮರಾಯರ ಹಾಗೆ ಆಗಲು ಅಡ್ಡಿಯಿಲ್ಲ ಎಂದೆಣಿಸಿದ್ದೆ- ಆದರೆ ರೇಷನ್ ಕಾಲದಲ್ಲೂ ಸಮ್ಮೇ ಳನದ ಮೂರು ದಿನಗಳಲ್ಲಿ ಅಲ್ಲಿನ ಊಟ, ಉಪಚಾರಗಳಿಂದ ನಾವೇ ಮರಿ ಭೀಮರಾದೆವು— ಆಗ ಮಾತ್ರ ಈ "ಭೀಮ"ನ ಶಕ್ತಿಯನ್ನು ನಾನು ಅಳೆಯುವಂತಾಯಿತು. ಉಡುಪಿಯತ್ತ ಕಡೆಯಿಂದ ಅಡುಗೆಯವರನ್ನು ಸಾಗಿಸಿಕೊಂಡು ಹೋಗಿ, ಅಲ್ಲಿ ತಾನು ಸ್ವತಃ ವಲಲ ಭಟ್ಟನಾಗಿ ತನ್ನ ಕಾರ್ಯವನ್ನು ನಿರ್ವ ಹಿಸಿದ ಈ ಭೀಮನನ್ನು ಸಮ್ಮೇಳನಕ್ಕೆ ಬಂದವರೆಲ್ಲರೂ ಕೊಂಡಾ ಡಿದರು.

೧೯೬೦ರಲ್ಲಿ ನಮ್ಮ ಬ್ರಹ್ಮಾವರದಲ್ಲಿ ಕರ್ಣಾಟಕ ಸಂಘದ ಆಶ್ರಯದಲ್ಲಿ ಶ್ರೀ ಭೀಮರಾಯರನ್ನು, ಶ್ರೀ ಕಾರಂತರನ್ನು, ದಿ|

ಶ್ರೀ ವಿ.ಎಸ್. ಕುಡ್ವರ ಅಧ್ಯಕ್ಷತೆಯಲ್ಲಿ ಸನ್ಮಾನಿಸಿದ್ದೆವು. ಇದು ತನಗೆ ಸಾರ್ವಜನಿಕ ನೆಲೆಯಲ್ಲಿ ದೊರೆತ ಪ್ರಥಮ ಸನ್ಮಾನ ಎಂದು ಅವರು ಅಂದು ಹೇಳಿದ್ದ ನೆನಪು. "ನಾನು ಹುರುಳಿ. ಇವರು ಕುಡುವರು (ವಿ.ಎಸ್ ಕುಡ್ವರು) ತುಳುವಿನಲ್ಲಿ ಕುಡು ಅಂದರೆ ಹುರುಳಿ. ಅಂದ ಮೇಲೆ ನಾವಿಬ್ಬರೂ ಒಂದೇ ಎಂದ ಹಾಗಾಯಿ ತಲ್ಲವೆ?" ಚುರುಕು ಮಾತಿನ ಭೀಮರಾಯರ ಈ ಲಘು ಹಾಸ್ಯ ನನ್ನ ನೆನಪಿನಲ್ಲಿ ಇನ್ನೂ ಹಸಿರಾಗಿಯೇ ಉಳಿದಿದೆ.

## — ೨ —

ಹುರುಳಿ ಎಂಬುದು ಘಟ್ಟದ ಮೇಲಿನ ಮೇಗರವಳ್ಳಿಯ ಹತ್ತಿರದ ಒಂದು ಗ್ರಾಮ. ಕರ್ಣಾಟಕ ಬ್ರಾಹ್ಮಣರಾದ ಶ್ರೀ ಭೀಮರಾಯರ ಹಿರಿಯರು ಎಂದಿನಿಂದ ಈ ಜಿಲ್ಲೆಯಲ್ಲಿ ವಾಸಿಸಲು ಆರಂಭಿಸಿದ್ದರು ಎಂದು ಹೇಳಲು ಬರುವುದಿಲ್ಲ.

ಭೀಮರಾಯರ ತಂದೆ ಶ್ಯಾಮರಾಯರು ಉಡುಪಿ ಮುನ್ಸಿಫ್ ಕೋರ್ಟಿನಲ್ಲಿ ಗುಮಾಸ್ತೆಯಾಗಿದ್ದರು. ಅವರ ಹೆಂಡತಿ ಬಿಷ್ಟಮ್ಮ. ಈ ದಂಪತಿಗಳಿಗೆ ಗಂಡು ಮಕ್ಕಳು ಮೂವರು. ಕೃಷ್ಣರಾಯರು, ವೆಂಕಟಸುಬ್ಬರಾಯರು, ಮೂರನೇಯವರೇ ನಮ್ಮ ಭೀಮರಾಯರು. ಭೀಮರಾಯರ ಜನನ ೧೮೮೬ ಎಂದು ಹಲವು ಕಡೆ ಪ್ರಕಟವಾಗಿದೆ. ಆದರೆ ನಾನು ನೋಡಿದ ಒಂದು ಕೋರ್ಟ್ ದಾಖಲೆಯಿಂದ ಶ್ರೀ ಭೀಮರಾಯರ ಜನನ ೧೮೮೫ ಎಂದು ತರ್ಕಿಸುತ್ತೇನೆ. ನನಗೆ ಈ ದಾಖಲೆ ಒದಗಿಸಿದವರು ಭೀಮರಾಯರ ಅತ್ಯಂತ ಮಿತ್ರರೂ, ಅವರ ಕೃತಿಗಳ ಪ್ರಕಾಶಕರೂ

ಆದ ಶ್ರೀ ದಾಮೋದರ ಬಾಳಿಗರು. [೧೫೨೭ರಲ್ಲಿ ಶ್ರೀ ಬಾಳಿಗರ ಒಂದು ವ್ಯವಹಾರದಲ್ಲಿ ಶ್ರೀ ಭೀಮರಾಯರು ಸಾಕ್ಷಿದಾರರಾಗಿ ತನ್ನ ಪ್ರಾಯ ಆಗ ೬೩ ವರ್ಷ ಎಂದು ನ್ಯಾಯಾಲಯದಲ್ಲಿ ಹೇಳಿಕೆ ನೀಡಿದ್ದರು.]

ಭೀಮರಾಯರ ಸಹೋದರರಾದ ಶ್ರೀ ವೆಂಕಟಸುಬ್ಬರಾಯರೂ ಬಹುಕಾಲ ಉಡುಪಿಯ ತಾಲೂಕು ಬೋರ್ಡ್ ಪ್ರಾಥಮಿಕ ಶಾಲೆಯಲ್ಲಿ (ಅನಂತರದ ಮುನಿಸಿಪಲ್ ಮೆಯಿನ್ ಶಾಲೆ) ಅಧ್ಯಾಪಕರಾಗಿದ್ದರು. ಸ್ವತಹ ಕವಿಗಳೂ, ಸಂಗೀತ ತಜ್ಞರೂ, ನಂದಳಿಕೆಯವರ ಗೆಳೆಯರೂ ಆಗಿದ್ದ ಶ್ರೀ ಸುಬ್ಬರಾಯರು, ಭೀಮರಾಯರಿಗೆ ಓರ್ವ ಉತ್ತಮ ಮಾರ್ಗದರ್ಶಕರಾಗಿದ್ದರು.

ಭೀಮರಾಯರ ಪ್ರಾಥಮಿಕ ವಿದ್ಯಾಭ್ಯಾಸ ಉಡುಪಿಯಲ್ಲೂ, ಮಾಧ್ಯಮಿಕ ಶಿಕ್ಷಣ ಕೆಲವು ಕಾಲ ತೀರ್ಥಹಳ್ಳಿಯಲ್ಲೂ ನಂತರ ಉಡುಪಿ ಕ್ರಿಶ್ಚಿಯನ್ ಹೈಸ್ಕೂಲಿನಲ್ಲೂ ನಡೆಯಿತು. ೧೯೧೧ರಲ್ಲಿ ಉಡುಪಿಯ ಕ್ರಿಶ್ಚಿಯನ್ ಹೈಸ್ಕೂಲಿನಲ್ಲಿ ಪ್ರಥಮ ಎಸ್. ಎಸ್. ಎಲ್. ಸಿ. ಪರೀಕ್ಷೆ ನಡೆದದ್ದರಿಂದ ಆ ಸುಮಾರಿಗೆ ಭೀಮರಾಯರೂ ಎಸ್. ಎಸ್. ಎಲ್. ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು ಎಂದು ನಿರ್ಣಯಿಸಬಹುದು.

ತನ್ನ ವಿದ್ಯಾಭ್ಯಾಸ ಮುಗಿದ ನಂತರ ಕೆಲವು ಕಾಲ ಶ್ರೀ ಭೀಮರಾಯರು ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಕೆಲಸ ಮಾಡಿದ್ದರು. ಆ ನಂತರ ತಂದೆ ಶ್ಯಾಮರಾಯರಿಗೆ ಕಲ್ಲಿಕೋಟೆಗೆ ವರ್ಗವಾದ ಪ್ರಯುಕ್ತ ಶ್ರೀ ಭೀಮರಾಯರೂ ಅವರ ಜತೆಯಲ್ಲಿಯೇ ಕಲ್ಲಿಕೋಟೆಗೆ ಹೋಗಿ ಅಲ್ಲಿ ಕಾಲೇಜ್ ಒಂದರಲ್ಲಿ ಕನ್ನಡ ಪಂಡಿತರಾಗಿ ಕೆಲಸ ಮಾಡಿ

ದರು. ಇದು ೧೯೧೬ರಲ್ಲಿ. ಕೆಲವು ಕಾಲ ಕಲ್ಲಿಕೋಟೆಯ "ನೆಡುಂಗಾಡಿ ಬೇಂಕ್"ನಲ್ಲಿ ಉದ್ಯೋಗಸ್ಥರೂ ಆಗಿದ್ದರು. ಆ ಕೆಲಸದ ನಿಮಿತ್ತವಾಗಿಯೇ ಮಂಗಳೂರಿಗೆ ವರ್ಗವಾಗಿ ಬಂದ ಸ್ವಲ್ಪ ಸಮಯದಲ್ಲಿಯೇ 'ನೆಡುಂಗಾಡಿ ಬೇಂಕ್' ನಿಂತು ಹೋದದ್ದರಿಂದ ಆ ನಂತರದ ಭೀಮರಾಯರ ಸೇವೆ ಪತ್ರಿಕೋದ್ಯಮಕ್ಕೆ- ಸಾಹಿತ್ಯ ಕೃತಿ ರಚನೆಗೆ ಮೀಸಲಾಯಿತು.

ನಮ್ಮ ಜಿಲ್ಲೆಯ ಶ್ರೇಷ್ಠ ಪತ್ರಿಕೆಗಳಾದ ಕಂಠೀರವ, ಸುವಾಸಿನಿ, ಕೃಷ್ಣಸೂಕ್ತಿ, ಸ್ವದೇಶಾಭಿಮಾನಿ ಮುಂತಾದ ಪತ್ರಿಕೆಗಳಿಗೆ ಲೇಖನವನ್ನು ನೀಡುವುದರ ಮೂಲಕ ತನ್ನ ಪತ್ರಿಕಾ ವ್ಯವಸಾಯವನ್ನು ಆರಂಭಿಸಿದ ಶ್ರೀ ರಾಯರು ಕಂಠೀರವ ಮತ್ತು ಕೃಷ್ಣಸೂಕ್ತಿಗಳ ಬಿಡುವು ಹೊತ್ತಿನ ಸಂಪಾದಕರಾಗಿಯೂ ಇದ್ದರು.

ದಿ| ಬೋಳಾರ ವಿಠಲರಾಯರೂ ಶ್ರೀ ಭೀಮರಾಯರೂ ಏಕದೇಹನ್ಯಾಯಿಗಳು ಎಂದು ಅವರ ಆತ್ಮೀಯ ವಲಯಗಳಲ್ಲಿ ಹೇಳಿಕೊಳ್ಳುತ್ತಿದ್ದರು. ಅಂತೂ ಶ್ರೀ ಭೀಮರಾಯರು ಕಂಠೀರವಕ್ಕಾಗಿ ತನ್ನನ್ನು ಸಂಪೂರ್ಣ ಸಮರ್ಪಿಸಿ ಕೊಂಡಿದ್ದರು. ಮೊದಲು ಬಿಡುವು ಹೊತ್ತಿನ ಸಂಪಾದಕರಾಗಿ, ೧೯೩೨ರ ನಂತರ ಪೂರ್ತಿ ಹೊತ್ತಿನ ಸಂಪಾದಕರಾಗಿ -ಬೋಳಾರ ವಿಠಲರಾಯರ ನಿಧನದ ನಂತರ ೧೯೪೫ರಿಂದ ಎಂ. ಬಾಬುರಾಯ ಪ್ರಭುಗಳ ಒಡೆತನಕ್ಕೆ ಕಂಠೀರವ ಬಂದ ಮೇಲೂ-೧೯೬೭ರಲ್ಲಿ ಕಂಠೀರವ ತನ್ನ ಕೊನೆಯ ಉಸಿರು ಎಳೆಯುವ ತನಕವೂ - ಭೀಮರಾಯರು ಅದರ ಸಂಪಾದಕರಾಗಿ ತನ್ನ ಹರಿತವಾದ ಬರೆಹಗಳಿಂದ ಸಿಂಹದಂತೆ ಗರ್ಜಿಸಿದ್ದರು.

ಬಹು ವಾಚಾಲರಾಗಿದ್ದ ಶ್ರೀ ಭೀಮರಾಯರು ಲಘು ಸ್ವಭಾವಿಗಳಾಗಿ, ಗೆಳೆಯರೊಡನೆ ಹರಟುವುದರಲ್ಲಿ, ಗೇಲಿಗಳಲ್ಲಿ

ಆನಂದಪಡುತ್ತಿದ್ದರು. ಮುಳಿಯ, ಗೋವಿಂದ ಪೈ, ಉಗ್ರಾಣ, ಉಳ್ಳಾಲ, ದಾಮೋದರ ಬಾಳಿಗ, ಮಂಜೇಶ್ವರ ಅನಂತ ರಾಯರು, ಎಂ. ಎಸ್. ಕಾಮತರು, ಶಹಬಾಜಿ ಶ್ರೀನಿವಾಸಾ ಚಾರ್, ಓಡ್ಲಮನೆ ಸೀತಾರಾಮ ಶಾಸ್ತ್ರಿ, ಡಿ. ಕೆ. ಭಾರ ದ್ವಾಜ, ಬಿ. ಶಂಕರ ಭಟ್ಟರು, ಕುಡ್ವಿ ವಾಸುದೇವ ಶೆಣೈ, ಪಿ. ಕೆ. ನಾರಾಯಣ ಮುಂತಾದ ಹಲವು ಹಿರಿಯ ಕಿರಿಯರು ಭೀಮ ರಾಯರಿಗೆ ಬದುಕಿನಲ್ಲಿ ಒದಗಿದ ಆತ್ಮೀಯರು, ಮಿತ್ರರು.

ಅವರು ಸೇವೆ ಸಲ್ಲಿಸಿದ ಸಂಸ್ಥೆಗಳಲ್ಲಿ ಮಂಗಳೂರ ಮಿತ್ರ ಮಂಡಲಿ, ಮಂಗಳೂರ ಮುನಿಸಿಪಲ್ ಕೌನ್ಸಿಲು ಈ ಎರಡು ಸಂಸ್ಥೆಗಳು ಪ್ರಮುಖವಾದವುಗಳು. ೧೯೪೩ರಲ್ಲಿ ಭೀಮ ರಾಯರು ಮಂಗಳೂರ ಮುನಿಸಿಪಲ್ ಕೌನ್ಸಿಲರ್ ಆಗಿದ್ದರು.

ಸಾಹಿತಿಗಳಿಗೆ, ಪತ್ರಿಕೋದ್ಯಮಿಗಳಿಗೆ, ಅಧ್ಯಾಪಕರಿಗೆ ಒದಗುವ ಬಡತನದ ಬದುಕನ್ನೇ ಆದರೂ ತೃಪ್ತಿಯಿಂದ ಕೃತಾ ರ್ಥವಾದ ಬಾಳನ್ನು ಭೀಮರಾಯರು ತನ್ನ ಕೊನೆಯ ಉಸು ರಿನ ತನಕವೂ ನಡೆಸಿ ೧೯೭೦ರ ಅಗಸ್ಟ್ ೪ರಂದು ತನ್ನ ಇಹ ಲೋಕದ ಯಾತ್ರೆ ಮುಗಿಸಿ ಪರಮಾತ್ಮನ ಪಾದದಡಿ ಸೇರಿದರು–ಕೃತಾತ್ಮರಾದರು.

ಭೀಮರಾಯರು ಗಳಿಸಿದ ಆಸ್ತಿ—ಕನ್ನಡನಾಡಿನಲ್ಲಿ ಅವರ ಕೃತಿಗಳ ಮೂಲಕ ಸಾರ್ವಜನಿಕ ಕಾರ್ಯಗಳ ಮೂಲಕ ಸ್ಥಿರವಾಗಿ ನಿಂತ ಅವರ ಕೀರ್ತಿ — ಆದರೆ ಇರಲು ಒಂದು ಸ್ವಂತದ ಮನೆಯೂ ಇಲ್ಲ. ಬದುಕಿನ ಬಹು ಭಾಗ ಕಳೆದದ್ದು ಮಂಗಳೂರಿನ ಪಾಂಡೇಶ್ವರದ ಒಂದು ಬಾಡಿಗೆ ಮನೆಯಲ್ಲಿ— ಉಡುಪಿಯಲ್ಲಿ ಹಿರಿಯರಿಂದ ಬಂದ ಆಸ್ತಿಯಲ್ಲಿ ಮಾರಿ ಹೋಗಿ ಉಳಿದದ್ದು ಕೊಂಚ ಈಗಲೂ ಉಂಟು.

ಮೊದಲನೆಯ ಹೆಂಡತಿ ತೀರಿಕೊಂಡ ನಂತರದ ಎರಡನೆಯ ಹೆಂಡತಿ ಗೌರಮ್ಮ. ಅವರಲ್ಲಿ ಎರಡು ಗಂಡು, ರಾಮಚಂದ್ರ, ಸುಧಾಕರ, ಎರಡು ಹೆಣ್ಣು ಅನುಸೂಯ, ಅಹಲ್ಯಾ; ಮೊದಲನೆಯ ಹೆಂಡತಿಯಲ್ಲಿ ಓರ್ವ ಹೆಣ್ಣು ಮಗಳೂ ಇದ್ದಾರೆ.

ರಾಮಚಂದ್ರ—ಸುಧಾಕರ ಇಬ್ಬರೂ ಈಗ ಸಿಂಡಿಕೇಟ್ ಬೇಂಕಿನಲ್ಲಿ ಉದ್ಯೋಗದಲ್ಲಿದ್ದಾರೆ. ತಂದೆ ಇಟ್ಟ ಹೆಜ್ಜೆಯಲ್ಲಿಯೇ ಮುನ್ನಡೆಯುತ್ತಾ ಸಾಹಿತ್ಯಾಭಿಮಾನಿಗಳಾಗಿ ಕೃತಿ ರಚನೆಯ ಕಾರ್ಯದಲ್ಲಿಯೂ ನಿರತರಾಗಿದ್ದಾರೆ. ಮಗಳು ಅನಸೂಯ ಕೆಲವು ಸಣ್ಣ ಕತೆಗಳನ್ನು ಬರೆದು ಪ್ರಕಟಿಸಿದ್ದಾರೆ. ಇವಿಷ್ಟು ಅವರ ಕುಟುಂಬ—ಅವರ ವ್ಯಕ್ತಿ ಜೀವನಕ್ಕೆ ಸಂಬಂಧಿಸಿದ್ದು.

— ೩ —

ಶ್ರೀ ಭೀಮರಾಯರು ಕರ್ಣಾಟಕದ ಹಿರಿಯ ಪತ್ರಿಕೋದ್ಯಮಿ. ಅರ್ಧ ಶತಮಾನಕ್ಕೂ ಹೆಚ್ಚಿನ ಕಾಲ ಈ ವೃತ್ತಿಯಲ್ಲಿ ದುಡಿದು ಅದರ ಸಿಹಿ–ಕಹಿಗಳ ಅನುಭವವನ್ನು ಹೊಂದಿದವರು. ''ಹಾಯಾಗಿ ಆರಾಮ ಕುರ್ಚಿಯಲ್ಲಿ ಕುಳಿತು ಕಾಲು ನೀಡಿ ಈ ಕಾಷ್ಠ ವ್ಯಸನದಿಂದ ದೂರವಿರುವಂತಿಲ್ಲ. ಒಟ್ಟಿನಲ್ಲಿ ಪತ್ರಿಕೋದ್ಯಮವೆಂಬುದು ಜೀವನಕ್ಕೊಂದು ವ್ಯಾಪ್ತಿ—ಆದರೆ ಶ್ರದ್ಧಾಸಕ್ತಿಯಿಂದ ಶ್ರಮವಹಿಸಿ ಸಮಾಜಕ್ಕೆ ಆದರ್ಶ ಮಾರ್ಗದರ್ಶನ ನೀಡಬೇಕೆಂಬ ಧ್ಯೇಯದಿಂದ ದುಡಿಯುವ ಸಾಹಸಿಗಳಿಗೆ ಇದೊಂದು ಸಾರ್ಥಕ ಸಂತೃಪ್ತಿಯನ್ನು ನೀಡುವ ಕಾಮಧೇನುವೂ ಹೌದು"– ಇದು ತನ್ನ ವೃತ್ತಿಯ ಕುರಿತು ಭೀಮರಾಯರು ಹೊಂದಿದ್ದ ತೃಪ್ತಿ.

ಪತ್ರಿಕಾ ವ್ಯವಸಾಯಕ್ಕೆ ತಾನು ಕಾರಣಾಂತರಗಳಿಂದ ಇಳಿಯಬೇಕಾಗಿ ಬಂದ ಸಂಗತಿಯನ್ನು ಶ್ರೀ ಭೀಮರಾಯರೇ ಒಂದೆಡೆ ಹೀಗೆ ಹೇಳಿದ್ದಾರೆ:

"ನನ್ನ ಪಾಲಿಗೆ ಈ ಪತ್ರಿಕೋದ್ಯಮ ಬಂದದ್ದು ಕೇವಲ ಆಕಸ್ಮಿಕ. ಅದು ಘಟಿಸಿದ್ದು ಹೀಗೆ:

ದಿ|| ಮಂಜೇಶ್ವರ ಗೋವಿಂದ ಪೈಗಳು ೧೯೧೧ನೇ ಇಸವಿಯಲ್ಲಿ 'ಹೊಲೆಯನಾರು?' ಎಂಬ ಶಿರೋನಾಮೆಯಡಿಯಲ್ಲಿ ಒಂದು ಗದ್ಯ ರೂಪದ ಪದ್ಯವನ್ನು ಬರೆದಿದ್ದರು. 'ಹೊಲೆಯ ಊರ ಹೊರಗಿಹನೇ ಬಲ್ಲವರು ಹೇಳಿ' ಎಂಬುದು ಅದರ ಪ್ರಥಮ ಪಂಕ್ತಿಯಾಗಿತ್ತೆಂದು ಜ್ಞಾಪಕ. ಈ ಬರಹದಲ್ಲಿದ್ದಂತಹ ಅಭಿಪ್ರಾಯ ಕೆಲವರನ್ನು ಚುಚ್ಚಿತು. ನಾನಾಗ ಮೆಟ್ರಿಕ್ ವಿದ್ಯಾರ್ಥಿಯಾಗಿದ್ದೆ. ನನ್ನ ಹಿರಿಯ ಮಿತ್ರರನೇಕರು ಈ ಪದ್ಯವನ್ನು ನಾನು ಪ್ರತಿಭಟಿಸಲೇಬೇಕೆಂದು ಆಗ್ರಹ ಪಡಿಸಿದರು. ನನಗೂ ಒಂದು ರೀತಿಯ ಆಸಕ್ತಿ ಹುಟ್ಟಿತು. ಪದ್ಯವನ್ನು ಆಳವಾಗಿ ಪರಿಶೀಲಿಸಿ ನೋಡಿದಾಗ ಪದ್ಯದಲ್ಲಿ ಪ್ರಾಸ ಲೋಪವಾಗಿರುವುದು ಕಂಡು ಬಂದಿತು. ಇದಕ್ಕಿಂತ ಹೊರತಾಗಿ ಖಂಡನಾರ್ಹವಾದಂತಹ ವಿಚಾರವೇನೂ ಅದರಲ್ಲಿ ಇರಲಿಲ್ಲ. ಹೀಗೆ ಪದ್ಯ ಪ್ರಾಸರಹಿತವಾಗಿರುವ ದೋಷವನ್ನು ಎತ್ತಿ ಹಿಡಿದು ಪದ್ಯ ಪ್ರಕಟವಾಗಿದ್ದ 'ಸ್ವದೇಶಾಭಿಮಾನಿ' ವಾರಪತ್ರಿಕೆಗೆ ಬರೆದು ಕಳುಹಿಸಿದೆ (ಆಗ ಶ್ರೀ ವಿ.ಎಸ್. ಕಾಮತ್ ಅವರು ಅದರ ಸಂಪಾದಕರಾಗಿದ್ದರು.) ನನ್ನ ಬರಹ ಪ್ರಕಟವಾಯಿತು. ಇದಕ್ಕುತ್ತರವಾಗಿ ಶ್ರೀ ಪೈಗಳು ತಾವು ಬಂಗಾಳಿ ಕವಿ ಮಧುಸೂದನದತ್ತನ ಮಾದರಿಯಲ್ಲಿ ಪದ್ಯ ಬರೆದುದಾಗಿ ಪ್ರತಿಕ್ರಿಯೆಯನ್ನು ಅದೇ

ಪತ್ರಿಕೆಯಲ್ಲಿ ಪ್ರಕಟಿಸಿದರು. ಕೆಲವು ಕಾಲ ನನ್ನಿಂದ ಪ್ರತಿಭಟನೆ, ಅವರಿಂದ ಉತ್ತರ ರೂಪದಲ್ಲಿ ಪ್ರತಿಕ್ರಿಯೆ, ಹೀಗೆ ಸಾಗಿತು.

ಕೊನೆಗೊಮ್ಮೆ ಶ್ರೀ ಕಾಮತರು ತಪ್ಪು ತಿಳುವಳಿಕೆಯಿಂದ ನನ್ನ ಪತ್ರವನ್ನು ಪ್ರಕಟಿಸಲು ನಿರಾಕರಿಸಿ ಶ್ರೀ ಪೈಗಳ ಉತ್ತರ ದೊಂದಿಗೆ ಈ ಸಂವಾದವನ್ನು ಕೊನೆಗಾಣಿಸಿರುವುದಾಗಿ ತಿಳಿಸಿ ದರು. ನನಗೆ ಇದು ಸರಿಕಾಣದೆ ನನ್ನ ಸೋದರ ಮಾವನ ಮಗ ದಿ| ಶ್ರೀ ಕಡೆಕಾರು ರಾಜಗೋಪಾಲ ಕೃಷ್ಣರಾಯರಿಗೆ ಅದನ್ನು ಕಳುಹಿಸಿ ಕೊಡಲಾಗಿ ಅದನ್ನು ಶ್ರೀ ವೆಂಕಟ ಕೃಷ್ಣಯ್ಯ ಅವರ ಸಂಪಾದಕತ್ವದಲ್ಲಿ ನಡೆಯಿಸಲಾಗುತ್ತಿದ್ದ "ಸಾಧ್ವಿ" ಪತ್ರಿಕೆಯಲ್ಲಿ ಪ್ರಕಟಗೊಳಿಸಲಾಯಿತು. ಅಲ್ಲಿಂದ ಮುಂದೆ ನನಗೆ ಲೇಖನ—ಬರಹ—ವಿಡಂಬನೆಗಳನ್ನು ಬರೆಯುವ ಆಸಕ್ತಿ ಮೂಡಿ ('ಹತ್ತರ ಜೊತೆಗೆ ಹನ್ನೊಂದು' ಎಂಬಂತೆ) ನಾನೂ ಒಬ್ಬ ಪತ್ರಿಕೋದ್ಯ ಮಿಯಾಗುವಂತೆ ಸ್ವಯಂಪ್ರೇರಣೆ ಉಂಟಾಗಿ ಅದಕ್ಕೆ ಸಕಾಲ ದಲ್ಲಿ ದೊರೆತ ಪ್ರೋತ್ಸಾಹ ನನ್ನ ಜೀವನಕ್ಕೊಂದು ದಾರಿ ಕಲ್ಪಿಸಿ ಕೊಟ್ಟಿತು.

೧೯೧೯ರಲ್ಲಿ ದಿ| ಶ್ರೀ ಬೋಳಾರ ವಿಠಲರಾಯರು ತಮ್ಮ ಮೋಟಾರು ಕಂಪೆನಿಯ ಜಾಹಿರಾತಿಗಾಗಿಯೇ ಎಂಬಂತೆ ಕಂಠೀ ರವ ವಾರಪತ್ರಿಕೆಯನ್ನು ಪ್ರಥಮವಾಗಿ ಧರ್ಮಪ್ರಕಾಶ ಛಾಪ ಖಾನೆಯಲ್ಲಿ ಹೊರಡಿಸಿದರು. (ಜನ ಸಾಮಾನ್ಯರ ಭಾಷೆಯಲ್ಲಿ ಕಂಠೀರವ–'ಮೋಟಾರು ಪೇಪರು' ಎಂದೇ ಪ್ರಸಿದ್ಧಿ ಗೊಂಡಿತ್ತು). ಆ ಸಂದರ್ಭದಲ್ಲಿ ದಿ| ಶ್ರೀ ಕಡೆಕಾರ್ ರಾಜಗೋಪಾಲ ಕೃಷ್ಣ ರಾಯರು, ಬೆನಗಲ್ ರಾಮರಾಯರು, ಡಿ. ಕೆ. ಭಾರದ್ವಾಜರು ಇವರೇ ಮೊದಲಾದವರ ಸಹಸಂಪಾದಕತ್ವದ ಜೊತೆಯಲ್ಲಿ ನಾನೂ ಕೂಡಿ ಸಹಕರಿಸಿ ಲೇಖನಗಳನ್ನು ಒದಗಿಸಲು ಶುರು

ಮಾಡಿದೆ. ಆಗ್ಗೆ ನಾನು ಕಲ್ಲಿಕೋಟೆಯ ಬಿ. ಜಿ. ಯಂ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕನಾಗಿದ್ದೆ. ನಾನು ಲೇಖನಗಳನ್ನು ಬರೆದು ಶ್ರೀ ಭಾರದ್ವಾಜರಿಗೆ ಅಥವಾ ವಿಠಲರಾಯರಿಗೆ ಕಳುಹಿಸುತ್ತಿದ್ದೆ. ಭಾರದ್ವಾಜರು ನನ್ನ ಆಪ್ತ ಮಿತ್ರರೂ, ನಿಕಟವರ್ತಿಗಳೂ ಆಗಿದ್ದು ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದೆವು. ಅವರೇ ಸ್ವತಃ "ತಿಲಕ ಸಂದೇಶ"ದ ಸಂಪಾದಕರಾಗಿದ್ದರಲ್ಲದೆ ನನ್ನಿಂದ ಒಂದೆರಡು ಲೇಖನ ಅಪೇಕ್ಷಿಸಿದ್ದೂ ಉಂಟು, ಹಾಗೇ ನಾನು ಬರೆದು ಕೊಟ್ಟದ್ದೂ ಉಂಟು.

ಶ್ರೀ ಬೋಳಾರ ವಿಠಲರಾಯರದೊಂದು ವಿಶಿಷ್ಟ ಮರ್ಜಿ. ಅವರದ್ದು ಸ್ಪರ್ಧಾತ್ಮಕ ದೃಷ್ಟಿ. ಗೌರವಸ್ಥ ಕುಟುಂಬದಲ್ಲಿ ಜನಿಸಿದ ಅವರ ವ್ಯಕ್ತಿತ್ವ ತೇಜಃಪೂರ್ಣವಾಗಿದ್ದು, ಆ ಕುಟುಂಬ ಗೌರವದ ಕಳೆ ಎದ್ದು ಕಾಣುವ ದೇಹ, ಅದಕ್ಕೆ ತಕ್ಕಂತಹ ನಡೆನುಡಿ, ವಯಸ್ಸಿನಲ್ಲಿ ಕಿರಿಯವನಾದರೂ ನನಗೂ ಅವರಿಗೂ ಗಳಸ್ಯ ಕಂಠಸ್ಯ. ಅವರ ತಂದೆ ತಹಶೀಲ್ದಾರರಾಗಿದ್ದು ಬ್ರಿಟಿಷ್ ಸರಕಾರದ ಬಗ್ಗೆ ಗೌರವಭಾವ ತಾಳಿದ್ದರು. ಅದೇ ಪ್ರವೃತ್ತಿ—ಮನೋಭಾವ ಇವರಿಗೂ ಬಂದಿತ್ತು. ವಿಠಲರಾಯರಿಗೆ ಗಾಂಧೀ ಚಳವಳಿ, ಸ್ವಾತಂತ್ರ್ಯ ಹೋರಾಟದ ಬಗ್ಗೆ ಸಹಾನುಭೂತಿ ಇತ್ತೇ ವಿನಹ ಪ್ರತ್ಯಕ್ಷವಾಗಿ ಅವರು ಅದನ್ನು ಬೆಂಬಲಿಸಲೇ ಇಲ್ಲ. ಶ್ರೀಮಂತ ಧೋರಣೆಯೊಂದಿಗೆ ಬೆಳೆದ ಅವರ ಈ ಮನೋಗುಣಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳುವ ಸ್ವಾತಂತ್ರ್ಯ ನಮ್ಮಲ್ಲಿ ಯಾರಿಗೂ ಇರಲಿಲ್ಲ. ಸ್ವಾಭಿಮಾನಿಗೆ, ರಾಷ್ಟ್ರಹಿತ ಪ್ರತಿಪಾದಕನಾಗಬೇಕೆನ್ನುವವನಿಗೆ ಇಂತಹ ಕಟ್ಟುನಿಟ್ಟಿನ ನಿರ್ಬಂಧ ಸರಿಬೀಳದಿದ್ದರೂ, ಕಾಲಕ್ಕೆ ತಕ್ಕುದಾಗಿ ನಡೆದುಕೊಳ್ಳಬೇಕಾದ ಪಾಡು ನಮ್ಮದಾಗಿತ್ತು. ೧೯೩೩ರಲ್ಲಿ ಅವರು

ನನ್ನ ಮೇಲೆ 'ಕಂಠೀರವ'ನ ಜವಾಬ್ದಾರಿಯನ್ನು ಹೊರಿಸಿದಾಗ ವಿಧಿಯಿಲ್ಲದೆ ಒಪ್ಪಿಕೊಂಡೆ.

೧೯೩೩ರಿಂದ ೧೯೬೬ರ ವರೆಗೂ ನಾನು ಪತ್ರಿಕೋದ್ಯಮಿಯಾಗಿ, ಸ್ವತಃ ಸಂಪಾದಕನಾಗಿ ಹಾಗೂ 'ಇಂಡಿಯನ್ ಎಕ್ಸ್‌ಪ್ರೆಸ್'ನ ಪ್ರತಿನಿಧಿಯಾಗಿ ಕೆಲಸ ಮಾಡಿದ್ದೇನೆ. ನನ್ನ ಜೀವನದ ಒಂದು ಮುಖ್ಯ ಕಾಲಖಂಡ ಪತ್ರಿಕೋದ್ಯಮಕ್ಕಾಗಿ ವ್ಯಯವಾಗಿದ್ದರೂ ಅದೊಂದು ಸಾರ್ಥಕ ಶ್ರಮವೆಂದು ನಾನು ತೃಪ್ತಿಪಟ್ಟುಕೊಳ್ಳುತ್ತೇನೆ. ಆದರಿಂದ ವೈಯಕ್ತಿಕವಾಗಿ ಲಾಭವನ್ನು ಹೊಂದಿದ್ದರೂ ಸಮಾಜದ ಗೌರವದ ದೃಷ್ಟಿಯಿಂದ ನನಗಾದ ಲಾಭ ಅತಿ ಹಿರಿದು." (ವಿಕ್ರಮ ವಿಜಯದಶಮಿ ಸಂಚಿಕೆ ೧೯೬೯).

○ ○ ○

ಭೀಮರಾಯರ ಲೇಖನಿಯು ಹರಿತ ಎಷ್ಟೋ ಅಷ್ಟೇ ವ್ಯಂಗ್ಯವೂ ಆಗಿದೆ. ಸ್ವತಹ ಹಾಸ್ಯ ಪ್ರವೃತ್ತಿಯವರಾಗಿ ತನ್ನ ಬರವಣಿಗೆಯಿಂದ ಶ್ರೀ ಭೀಮರಾಯರು ವಾಚಕ ವೃಂದವನ್ನು ಸ ದಾ ನ ಗೆ ಗ ಡ ಲ ಲ್ಲಿ ತೇಲಿಸಿಬಿಡುತ್ತಿದ್ದರು. ಪತ್ರಿಕಾ ಪ್ರಪಂಚದಲ್ಲಿ ವಿಡಂಬನಾತ್ಮಕ ಬರೆಹಗಳನ್ನು ಆರಂಭಿಸಿದ ಮೊದಲಿಗರಲ್ಲಿ ಶ್ರೀ ಭೀಮರಾಯರೂ ಓರ್ವರು. ಕಂಠೀರವದ ಅನೇಕ ಹಳೆಯ ಸಂಚಿಕೆಗಳು ಅವುಗಳಲ್ಲಿ ಪ್ರಕಟವಾಗುತ್ತಿದ್ದ Tit-Bits ಅಥವಾ Punch ನ ಮಾದರಿಯ "ಗುಂಡನ ಗಜೇಟು" ಈ ಬರಹಗಳಿಗೆ ಉದಾಹರಣೆ.

ನಮ್ಮ ರಾಜಕೀಯದ ಸ್ಥಿತಿಯನ್ನು ವ್ಯಂಗ್ಯಾರ್ಥದಲ್ಲಿಯಾದರೂ ಗುಂಡನ ಗಜೆಟನಲ್ಲಿ ಅವರು ಹೀಗೆ ಕವನಿಸಿದ್ದಾರೆ:

## ಗುಂಡಾ ಗುಂಡಿ ಕವನಗಳು

## ಬೇಕು — ಬ್ಯಾಡ

ಬಯಕೆ ಮನವನು ಮುತ್ತಿ ಆಶೆ ಬಲವಾಗಿ ಸುತ್ತಿ|
ಆದೂ ಇದೂ ಎಲ್ಲವೂ
ಬೇಕೂ ಬ್ಯಾಡದ್ದು ಜಗದಲೇ ಇಲ್ಲ||

.....................

ಗಾಂಧಿ ಹೇಳಿದ್ದು ಲೋಕಶಾಂತಿ
ಕೃಷಿಗೀಗ ಬೇಕಂತೆ ಕ್ರಾಂತಿ| ಶಾಂತಿಗೂ
ಕ್ರಾಂತಿಗೂ ಯಾವ ನೆಂಟು? ಯಾವು
ಯಾವುದಕೊ ಬ್ಯಾಡದಾ ಗಂಟು||

.....................

ಬೇಸಾಯ ವೃದ್ಧಿಗೆ ಕ್ರಾಂತಿ ಅದೇ
ಬೇಕು ಅಂದರು ಮಂತ್ರಿ| ಯಂತ್ರದಿಂ
ದಾದೀತೆ ಕ್ರಾಂತಿ? ಅದೇ ಈಗ ಬ್ಯಾಡದ
ಭ್ರಾಂತಿ||

.....................

ಪರಶಿವನ ಕೃಪೆಯಿಂದ ಜನ ಬದುಕ
ಬೇಕು| ಮಳೆ ಬೆಳೆ ದಯೆಯಿಂದ ಜನ
ಬಾಳಬೇಕು|| ಮಂತ್ರಿ ವಾಗ್ದಾನಗಳ
ವಿಶ್ವಾಸ ಹೋಯ್ತು| ಬೆಲೆ ಹತ್ತೋಟ
ಆ ಬರೆ ಮಾತೇ ಆಯ್ತು||

.....................

ಮಹಾ ಚುನಾವಣೆ ಆರಂಭವಾಯ್ತು|
ಆಳುವ ಪಾರ್ಟಿಗಾಶಾಖ ಏರುತಾ ಬಂತು||
ಮಂತ್ರಿ ಶಾಸಕ ಗಂಟು ಮಾಡಿದ್ದೇ
ಹೆಚ್ಚಾಯಿತು|| ಮುಂದೆ ಸ್ಥಾನವೇ
ಅವರಿಗಿಲ್ಲವಾದಿತ್ತು ||

( ಕಂಠೀರವ, ೩ ಮೇ ೧೯೩೬. )

೦ ೦ ೦ ೦

ಕಂಠೀರವದ ಬರವಣಿಗೆ ಮಂಗಳೂರಿನ ರಾಜಕೀಯದ ಮೇಲೆ ಮಾಡಿದ ಒಂದು ಪರಿಣಾಮವನ್ನು ಅಲ್ಲಿನ ಜನ ಈಗಲೂ ನೆನಸಿಕೊಳ್ಳುತ್ತಿದ್ದಾರೆ. 1936ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಬೋರ್ಡಿನ ಚುನಾವಣೆ ನಡೆದು ಕಾಂಗ್ರೆಸ್ಸು ಬಹುಪಕ್ಷವಾಗಿ ಗೆದ್ದು ಬಂದಿತು. ಆದರೆ ಅಧ್ಯಕ್ಷ ಚುನಾವಣೆಯಲ್ಲಿ ವಿಜಯಿ ಯಾದವರು ಆಗಿನ ಜಸ್ಟಿಸ್ ಪಾರ್ಟಿಯ ಮುಖಂಡರಾಗಿದ್ದ ದಿವಂಗತ ಶ್ರೀ ಮಹಾಬಲ ಹೆಗ್ಡೆಯವರು. ಕಾಂಗ್ರೆಸ್ಸಿನ ಸೋಲಿಗೆ, ಜಸ್ಟಿಸ್ ಪಾರ್ಟಿಯ ವಿಜಯಕ್ಕೆ ಕಾರಣಪುರುಷರು ಶ್ರೀ ಭೀಮರಾಯರು. ಅವರ ಕಂಠೀರವದ ಬರಹಗಳು ಎಂಬ ಸಂಗತಿ ನಾನು ಮಂಗಳೂರ ಅವರ ಮಿತ್ರರಿಂದಲೇ ಸಂಗ್ರಹಿಸಿದ್ದೇನೆ.

ಗಾಂಧೀಜಿಯವರ ವೈಯಕ್ತಿಕ ಜೀವನಾದರ್ಶಗಳಲ್ಲಿ ಶ್ರೀ ಭೀಮರಾಯರು ತುಂಬು ಗೌರವವುಳ್ಳವರಾಗಿದ್ದರೂ, ಅವರ ಸ್ವಾತಂತ್ರ್ಯ ಚಳವಳಿಯಲ್ಲೇ ಯಾವ ಭಿನ್ನಾಭಿಪ್ರಾಯ ಹೊಂದ ದವರಾಗಿದ್ದರೂ, ನಮ್ಮ ಜಿಲ್ಲೆಯ ಅವರ ಮಿತ್ರರಾಧ ಕೆಲವು ಗಣ್ಯ ವ್ಯಕ್ತಿಗಳ ಪ್ರಭಾವದಿಂದಾಗಿ ಶ್ರೀ ರಾಯರ ಒಲವು ಕಾಂ ಗ್ರೆಸ್ಸಿಗೆ ವಿರೋಧವಾಗಿ-ಜಸ್ಟೀಸ್ ಪಾರ್ಟಿಯ ಕಡೆಗಿತ್ತು. ಆದರೆ

1941ರ ವೈಯಕ್ತಿಕ ಸತ್ಯಾಗ್ರಹ, 1942ರ 'ಭಾರತ ಬಿಟ್ಟು ತೊಲಗಿ' ಚಳವಳಿಯ ನಂತರ ಶ್ರೀ ಭೀಮರಾಯರ ಮನಸ್ಸು ಕಾಂಗ್ರೆಸ್ಸಿನತ್ತ ತಿರುಗಿದೆ ಎಂಬ ಅಂಶ ಅವರ ಕಂಠೀರವದ ಬರೆಹಗಳಿಂದ ವ್ಯಕ್ತವಾಗುತ್ತದೆ.

ದೇಶದ ರಾಜಕೀಯವನ್ನು ನಿಷ್ಪಕ್ಷಪಾತವಾಗಿ ಕಂಠೀರವದ ಅಗ್ರಲೇಖನಗಳಲ್ಲಿ ಸಂಪಾದಕರಾದ ಶ್ರೀ ರಾಯರು ವಿಮರ್ಶಿಸುತ್ತಿದ್ದರಲ್ಲದೆ ಜನತೆಗೆ ರಾಷ್ಟ್ರದ ಐಕ್ಯ ಮತ್ತು ಸಮಗ್ರತೆಗಳ ಬಗ್ಗೆ ಎಚ್ಚರಿಕೆಯನ್ನು ನೀಡುತ್ತಿದ್ದರು. ಆಡಳಿತದಲ್ಲಿನ ಲೋಪದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸುವುದಲ್ಲದೆ ಪರಿಹಾರೋಪಾಯಗಳನ್ನು ಸೂಚಿಸುತ್ತಿದ್ದರು.

ನಮ್ಮ ದೇಶದ ಉತ್ತರದ ಗಡಿಯನ್ನು ಚೀನೀಯರು ಮುತ್ತಿದ ಸಂದರ್ಭದಲ್ಲಿ 1963ರ ಕಂಠೀರವದ ಸ್ವಾತಂತ್ರ್ಯೋತ್ಸವ ವಿಶೇಷ ಸಂಚಿಕೆಯಲ್ಲಿ ಶ್ರೀಯುತರು ಬರೆದ ಅಗ್ರಲೇಖನದ ಕೆಲವು ಅಂಶಗಳನ್ನು ಇಲ್ಲಿ ಉದಾಹರಿಸುತ್ತೇನೆ:

"ಇಂದಿನ ಸ್ವಾತಂತ್ರ್ಯ ದಿನಾಚರಣೆಯಂದು ಎಲ್ಲದಕ್ಕೂ ಮಿಗಿಲೆನಿಸಿ ರಾಷ್ಟ್ರ ರಕ್ಷಣೆ ಮತ್ತು ರಾಷ್ಟ್ರದ ಸಮಗ್ರತಾ ರಕ್ಷಣೆಗಳಿಗೆ ಪ್ರಾಧಾನ್ಯ ನೀಡಬೇಕಾದದ್ದು ಆದ್ಯ ಕರ್ತವ್ಯವೆಂದರೆ ತಪ್ಪಾಗಲಾರದು....ರಾಷ್ಟ್ರ ರಕ್ಷಣೆ ನಮ್ಮ ಹೊಣೆ ಎಂಬುದನ್ನು ಪ್ರತಿಯೊಬ್ಬ ಪ್ರಜೆಯೂ ಇಂದು ಒಪ್ಪಿಕೊಳ್ಳಬೇಕು.... ರಾಷ್ಟ್ರ ರಕ್ಷಣೆಯಲ್ಲಿ ದೇಶದ ಸಮಗ್ರತೆ, ಆಳುವ ಪಕ್ಷದಲ್ಲಿ ಒಕ್ಕಟ್ಟು, ಜನರಲ್ಲಿ ಏಕೀಭಾವ ಇರಬೇಕಾದದ್ದು ಅತ್ಯವಶ್ಯ. ಆದರೆ ಹಾಗಿದೆಯೆ? ಆಳುವ ಪಕ್ಷದಲ್ಲಿ 'ಅತೃಪ್ತರ ಸಂಖ್ಯೆ' ಅಧಿಕವಾಗುತ್ತಿದೆ. ಹಲವು ರಾಜ್ಯಗಳಲ್ಲಿನ ಮಂತ್ರಿ ಸಂಪುಟದಲ್ಲಿ ಬಿಕ್ಕಟ್ಟು ಕಂಡುಬಂದಿವೆ. ಅಲ್ಲಿ ಕ್ಷೋಭೆ, ವಿವಾದದ ವಾತಾವರಣ, ಸ್ಪರ್ಧೆ ಶಾಸ

ನದಿಂದ ಲಕ್ಷಾಂತರ ಮಂದಿ ಅಕ್ಕಸಾಲಿಗರ ಅನ್ನಕ್ಕೆ ಕಲ್ಲು ಬಿದ್ದು ಇನ್ನು ಅವರಿಗೆ ಸೂಕ್ತ ಪರಿಹಾರ ಕ್ರಮವಿಲ್ಲದೆ ಕೈ ತುತ್ತು ಹಾಕುವ ಅರ್ಧ ಮನಸ್ಸಿನ ಸಮಾಧಾನೋಕ್ತಿಗಳಾದರೂ ಹಾಗಿರಲಿ, ಮುಖ್ಯವಾಗಿ ರೈತವಾರಿ ಪದ್ಧತಿಯ ಜಮೀನನ್ನು 'ಎಸ್ಟೇಟ್' ಎಂದು ಪರಿಗಣಿಸಿ ಕೇಂದ್ರ ಸರಕಾರ ಪಾರ್ಲಿಮೆಂಟಿನ ಮುಂದಿಡಲು ನಿರ್ಧರಿಸಿರುವ ರಾಜ್ಯಾಂಗದ ೧೭ನೆಯ ತಿದ್ದುಪಡಿ ಅಂಗೀಕಾರ ಹೊಂದಿದ್ದು ಆದರೆ ದೇಶದಲ್ಲಿ ಈಗ ಕಾಣಬರುವ ಸಮಗ್ರತೆಯ ಮೇಲೆ ಕೂಡಾ ಅಗಾಧವಾದ ದುಷ್ಪರಿಣಾಮವೇ ಉಂಟಾಗದಿರದು. ಚೀನಿಯರ ಪಿಡುಗನ್ನು ದೂರಕ್ಕಟ್ಟಲು ರಾಷ್ಟ್ರವೆಲ್ಲ ಒಂದಾಗಿರಬೇಕಾಗಿದ್ದಾಗ ದೇಶದ ಸಮಗ್ರತೆಯನ್ನು ಕಲಕುವ ಇಂಥದೊಂದು ತಿದ್ದುಪಡಿಯನ್ನು ಇಷ್ಟೊಂದು ಆವಸರದಲ್ಲಿ ಇಂಥ ಸಂದಿಗ್ಧ ಸೂಕ್ಷ್ಮ ಪರಿಸ್ಥಿತಿಯಲ್ಲಿ ತರುವಂತೆ ಯೋಚಿಸಿದ್ದು ವಿವೇಕದ ಕೆಲಸವಲ್ಲ. ಪ್ರಕೃತ ಈ ತಿದ್ದುಪಡಿಯನ್ನು ಮುಂದಕ್ಕೆ ಹಾಕುವುದೇ ದೂರದೃಷ್ಟಿಯ ರಾಜನೀತಿ ಪಾಂಡಿತ್ಯಕ್ಕೊಂದು ಉಜ್ವಲ ಉದಾಹರಣೆಯಾದೀತು. ಭಾರತಕ್ಕೆ ಈಗ ಬೇಕಾಗಿರುವುದೂ ಅಷ್ಟೇ–"

o o o o

ನಮ್ಮ ಜಿಲ್ಲೆಯ ಜೀವನಾಡಿ ಶ್ರೀ ಶ್ರೀನಿವಾಸ ಮಲ್ಯರ ನಿಧನಕ್ಕಾಗಿ ಕಂಠೀರವವೂ ತನ್ನ ಕಣ್ಬನಿ ಹರಿಸಿತು. ತನ್ನ ಅಗ್ರಲೇಖನದಲ್ಲಿ ತನ್ನ ದುಃಖವನ್ನು ಈ ಪತ್ರಿಕೆ ಹೀಗೆ ತೋಡಿಕೊಂಡಿದೆ:

"ತಮ್ಮ ಜೀವನವನ್ನು ರಾಷ್ಟ್ರಸೇವೆಗೆ, ಜನಸೇವೆಗೆ ಧಾರೆ ಎರೆದು ಜಿಲ್ಲೆಯ ಈ ಕಾಲದ ಎಲ್ಲ ವೃದ್ಧಿಗೂ ಕಾರಣರಾದ ಶ್ರೀ ಉಳ್ಳಾಲ ಶ್ರೀನಿವಾಸ ಮಲ್ಯರು ಇಂದು ಮನೆ ಮನೆಗಳಲ್ಲಿಯೂ

ತಮ್ಮ ಹೆಸರು ಅಚ್ಚಳಿಯದೆ ಉಳಿಯುವಂತೆ ಮಾಡಿದ ಮಹಾನುಭಾವರು; ಮಹೋನ್ನತ ಪುರುಷರು; ಸರ್ವಜನರ ಅನುರಾಗಕ್ಕೆ ಪಾತ್ರರಾದ ನಮ್ಮ ನಾಡಿನ ಒಬ್ಬ ಶ್ರೇಷ್ಠ ಮುಂದಾಳುಗಳು. ಶ್ರೀ ಮಲ್ಯರ ಕುರಿತು ಬರೆಯಬೇಕಾದುದರಲ್ಲಿ ಸೇಕಡಾ ತೊಂಬತ್ತೊಂಬತ್ತು ಹಾಗೇ ಉಳಿದಿದೆಯಾದರೂ ನಮ್ಮ ಶಬ್ದಕೋಶ ಬರಡಾಗಿ ಇಷ್ಟಕ್ಕೆ ಇದನ್ನು ನಿಲ್ಲಿಸಬೇಕಾಗಿ ಬಂತೆಂದರೆ ಸಾಕು-ಶ್ರೀ ಮಲ್ಯರು ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡ ಕೀರ್ತಿವಂತರು, ಪುಣ್ಯಶಾಲಿಗಳು. ಅವರ ಋಣವನ್ನು ತೀರಿಸುವುದು ಕಷ್ಟ ಸಾಧ್ಯವೇ ಸರಿ ಎಂದರೆ ಎಲ್ಲವನ್ನು ಚುಟುಕಿನಲ್ಲಿ ಹೇಳಿದಂತಾಯಿತು."

ಉದಾತ್ತ ಭಾವನೆಗೆ ಕುರುಹಾಗಿ ಹಾಗೂ ಸಹೃದಯತೆಯನ್ನು ಹೊಂದಿದ್ದ ಶ್ರೀ ರಾಯರು ಕೃತಾರ್ಥ ಪತ್ರಿಕೋದ್ಯಮಿ ಎಂಬುದಕ್ಕೆ ಮೇಲಿನ ನುಡಿಗಳೇ ಸಾಕ್ಷಿಯಾಗಿ ನಿಲ್ಲಬಲ್ಲುವು.

— ೪ —

**ತಂ**ದೆ ಶ್ಯಾಮರಾಯರು ದೈವಭಕ್ತರು. ದೇವರ ನಾಮುಗಳನ್ನು ಸ್ವತಹ ತಾವೇ ರಚಿಸಿ, ನಿತ್ಯವೂ ಅದನ್ನು ಮಕ್ಕಳನ್ನು ಕೂಡಿಸಿಕೊಂಡು ಹಾಡುವುದು ಅವರ ರೂಢಿ. ಅಣ್ಣ ಸುಬ್ಬರಾಯರೂ, ಕವಿಗಳು, ಸಂಗೀತಗಾರರು. ಮನೆಯಲ್ಲಿಯೇ ವಾಯಲಿನ್ ಇತ್ತು. ಸಣ್ಣಂದಿನಿಂದಲೇ ಅಣ್ಣನ ಜತೆಗೂಡಿ ದಶಾವತಾರ ಆಟಗಳಿಗೆ ಹೋಗುವುದು ವಾಡಿಕೆ–ಈ ಹಿನ್ನೆಲೆಯ–ವಾತಾವರಣದಲ್ಲಿ ಬೆಳೆದು ಬಂದ ಭೀಮರಾಯರು ತನ್ನ ಮುಂದಿನ ಬಾಳಿನಲ್ಲಿ ಓರ್ವ ಕಲಾಭಿಮಾನಿಗಳಾಗಿ ಅದರಲ್ಲಿ ಆಸಕ್ತಿ ತಾಳಿ

ದರೆ ಆಶ್ಚರ್ಯವಿಲ್ಲ. ಲಲಿತ ಕಲೆಗಳಲ್ಲಿ ಪಾರಂಗತನಾಗಬೇಕಾದರೆ ಪೂರ್ವ ವಾಸನೆ ಬೇಕು. ಅದು ಸಾಕಷ್ಟು ಇವರಲ್ಲಿತ್ತು. ಭೀಮರಾಯರು ಹರಿಕಥೆಗಳಲ್ಲಿ ತನ್ಮಯರಾಗುತ್ತಿದ್ದರು. ಸ್ವತಹ ತಬಲಾ ನುಡಿಸುವುದರಲ್ಲಿ ಪ್ರವೀಣರಾಗಿದ್ದ ಭೀಮರಾಯರು ಹರಿಕಥೆ ಮತ್ತು ನಾಟಕಗಳಲ್ಲಿ ತಬಲಾ ನುಡಿಸಿದ್ದೂ ಉಂಟು. ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಶ್ರೀ ಬಿಡಾರಂ ಕೃಷ್ಣಪ್ಪ, ಮತ್ತು ಪಿಟೀಲು ಚೌಡಯ್ಯನವರ ಸಂಪರ್ಕ ಹಾಗೂ ಅಣ್ಣಾ ಸುಬ್ಬರಾಯರ ಗುರುತ್ವ—ಇವೆರಡೂ ಭೀಮರಾಯರಿಗೆ ಸಂಗೀತದಲ್ಲಿ ಹೆಚ್ಚಿನ ಪ್ರಾವೀಣ್ಯ ಹೊಂದಲು ಕಾರಣವಾಗಿರಬೇಕು.

ಶ್ರೀ ಭೀಮರಾಯರು ನಟರೂ ಹೌದು. ವಿಲಾಸಿ ನಟರಾಗಿ ಸ್ತ್ರೀ-ಪಾರ್ಟುಗಳನ್ನು ಧರಿಸಿದ್ದರಂತೆ. ಓರ್ವ ಪತ್ರಿಕೋದ್ಯಮಿಯಾಗಿ ಸ್ವಾಭಾವಿಕವಾಗಿ ನಮ್ಮ ಜಿಲ್ಲೆಗೆ ಆಗಮಿಸಿದ ಅಂದಿನ ನಾಟಕ ಕಂಪೆನಿಗಳ ಪ್ರದರ್ಶನಗಳನ್ನು ನೋಡುವ ಅವಕಾಶ ಅವರಿಗಿತ್ತು. ನಟಶ್ರೇಷ್ಠರಾದ ಗುಬ್ಬಿ ವೀರಣ್ಣ, ಬಿ. ಜಯಮ್ಮ, ಕೊಟ್ಟೂರಪ್ಪ. ಬಸವರಾಜ್, ರಾಘವೇಂದ್ರ ರಾವ್, ಮರಿರಾವ್, ಮೇಕಪ್ ಸುಬ್ಬಣ್ಣ ಇವರೆಲ್ಲರ ಪರಿಚಯವನ್ನು ಶ್ರೀ ರಾಯರು ಹೊಂದಿದ್ದರು. ನಟರು ಮಾತ್ರವಲ್ಲ ನಾಟಕ ಕಲೆಯ ಕುರಿತ ಅವರ ಕೆಲವು ಬಿಡಿ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ನಮ್ಮೂರಿನ ನಾಟಕ ಸಂಸ್ಥೆಗಳ ಕುರಿತ ಅವರ ಒಂದು ಲೇಖನದಲ್ಲಿ ಅಂದಿನ ನಾಟಕಗಳ ಸ್ಥಿತಿ ರಮ್ಯವಾಗಿ ವರ್ಣಿಸಲ್ಪಟ್ಟಿದೆ. ಅಲ್ಲಿನ ಕೆಲವು ಭಾಗಗಳು ಹೀಗಿವೆ:

“ನಮ್ಮೂರಿಗೆ ಸರ್ವಪ್ರಥಮವಾಗಿ ನಾಟಕದ ಕ್ರಮ ಸ್ವಾರಸ್ಯಗಳನ್ನು ತೋರಿಸಿ ಕೊಟ್ಟವರು ಮಂಗಳೂರಿನ ಸುಪ್ರಸಿದ್ಧ

ಕೀರ್ತನಕಾರ ದಿವಂಗತ ಶ್ರೀ ನಾರಾಯಣ ಭಟ್ಟರು; ಅವರು ಕಟ್ಟಿದ್ದು ಆ ಮರಾಠಿ ಸಂಸ್ಥೆ; ಕೆಲವು ವರ್ಷಗಳ ಬಳಿಕ ಕುಮಟೆ ಪ್ರಾಂತದ ಇನ್ನೊಂದು ಮರಾಠಿ ಸಂಸ್ಥೆಯೂ ಇತ್ತ ಬಂತಾದರೂ. ಮರಾಠಿ ಅರಿಯದ ನಮ್ಮ ಜನದ ಮೇಲೆ ಅವರಿಂದ ಅಷ್ಟಾಗಿ ಪರಿಣಾಮವಾಗಲಿಲ್ಲ. ಬಳಿಕ ಸುಮಾರು ೧೮೯೬ರ ಸುಮಾರಿಗೆ ಬಂತು ನಮ್ಮಲ್ಲಿಗೆ ಹಾಸನದಿಂದ ಒಂದು ನಾಟಕ ಮಂಡಲಿ. ಇದೇ ಇತ್ತ ಬಂದ ಪ್ರಥಮ ನಾಟಕ ಮಂಡಲಿ, ಎಲ್ಲ ವಿಷಯಗಳಲ್ಲಿಯೂ ಚೆನ್ನಾಗಿದ್ದು ಕನ್ನಡ ನಾಟಕಗಳನ್ನು ನೋಡಬೇಕೆಂಬ ಕುತೂಹಲವನ್ನು ಕೆರಳಿಸುತ್ತಿತ್ತು. ಇದರ ಬಳಿಕ ನಮ್ಮೂರು ಕಂಡ ಉತ್ತಮ ವರ್ಗದ ಎರಡನೆಯ ನಾಟಕ ಸಂಸ್ಥೆ ಎಂದರೆ ನಮ್ಮ ನೆರೆಯ ಮೈಸೂರು ಸೀಮೆಯ ಮೇಗರವಳ್ಳಿಯ 'ಸಜ್ಜನಾಶ್ರಿತ ನಾಟಕ ಮಂಡಲಿ.' ಇವರ ಪ್ರಯೋಗಗಳು ನಮ್ಮೂರಿನ ನಾಟಕಾಭಿಮಾನಿಗಳಲ್ಲಿ ಇವರ ಅನುಕರಣದ ಸ್ಫೂರ್ತಿಯನ್ನು ತುಂಬಿದವು; ಆಗಲೇ ನಮ್ಮೂರಿನ ನಾಟಕ ಮಂಡಲಿಗಳ ಉದಯ."

o o o o

"ಉಡುಪಿಯ ನಾಟಕ ಸಂಸ್ಥೆಗಳಲ್ಲಿ ಅಲ್ಲಿನ ಸಂಸ್ಕೃತ ವಿದ್ವಾಂಸರೂ ಕೀರ್ತನಕಾರರೂ ಆಗಿದ್ದ ಶ್ರೀ ಕುಪ್ಪಣ್ಣಾಚಾರ್ಯರ ನೇತೃತ್ವಕ್ಕೊಳಪಟ್ಟುದೇ ಗಣ್ಯವಾಗಿತ್ತು. ಕನ್ನಡ ನಾಡಿನಲ್ಲೆಲ್ಲ ಪ್ರಖ್ಯಾತರಾದ ನಾಟಕ ಶಿರೋಮಣಿ ಶ್ರೀ ಎ. ವಿ. ವರದಾಚಾರ್ಯರ ನಾಟಕ ಸಂಸ್ಥೆಯಲ್ಲಿ ನಮ್ಮೂರ ನಟರಾಗಿರುವಂಥ ಅರ್ಹತೆಯನ್ನು ಸಂಪಾದಿಸಿದ ಒಬ್ಬರೇ ಒಬ್ಬರಾದ ಶ್ರೀ ಉಪ್ಪೂರ ರಾಮಾಚಾರ್ಯರೇ ಹಿಂದೆ ಉಡುಪಿಯ ಈ ಸಂಸ್ಥೆಯಲ್ಲಿಯೂ ಪ್ರಧಾನ ಪುರುಷ ಪಾತ್ರವನ್ನು ವಹಿಸುತ್ತಿದ್ದರು. ಶ್ರೀ ಕುಪ್ಪಣ್ಣಾಚಾರ್ಯರ ಸಾಹಸೋದ್ಯಮದ ಫಲ

ವಾಗಿ ಈ ಸಂಸ್ಥೆಯ ವ್ಯಾಪ್ತಿ ಬೆಳೆಯಿತು. ಹೆಸರು ಬಂತು."

"ಶ್ರೀವರದಾಚಾರ್ಯರ ಸಂದರ್ಶನದ ಬಳಿಕ ನಮ್ಮೂರಲ್ಲಿ ಹುಟ್ಟಿದ ಮಂಗಳೂರಿನ ದಿವಂಗತ ಜನಾಬ್ ಶಾಬ್ ಸಾಹೇಬರ ಮಾಲಕತ್ವದ ಆ ಕನ್ನಡ ನಾಟಕ ಸಂಸ್ಥೆ ಜಿಲ್ಲೆಯಲ್ಲಿನ ಈ ಕಲೆಯ ಕಳೆ ಏರುವಂತೆ ಉಪಕರಿಸಿದೆ. ಒಳ್ಳೆಯ ಕವಿಗಳನ್ನು ಇಲ್ಲಿಗೆ ಕರೆಸಿ ಅವರಿಂದ ಉತ್ತಮ ಹೊಸ ನಾಟಕಗಳನ್ನು ಬರೆಯಿಸಿ ಜಿಲ್ಲೆಯ ಒಳ ಹೊರಗಿನ ಸಮರ್ಥ ನಟನಟಿಯರಿಂದ ಆ ನಾಟಗಳನ್ನಾಡಿಸಿ ಕನ್ನಡ ನಾಟಕಗಳ ಪ್ರಾಶಸ್ತ್ಯಕ್ಕೆ ಒಪ್ಪ ಕೊಟ್ಟ ಯಶಸ್ಸು —ಅನ್ಯ ಭಾಷೆಯವರಾದರೂ— ಈ ಮಹನೀಯರು."

"ನಮ್ಮೂರ ನಾಟಕ ಸಂಸ್ಥೆಗಳು ಯಾವುದೇ ಇರಲಿ, ಎಷ್ಟೇ ಇರಲಿ ಹಿಂದೆ ಶ್ರೀ ಕಾರ್ಕಳ ನಾರಾಯಣ ಹೆಗ್ಡೆಯವರೊಡನೆಯೂ ಬಳಿಕ ಇಲ್ಲಿಗೆ ಪರಿಚಿತರಾದ ಶ್ರೀ ನಾಗೇಶರಾಯರೊಡನೆಯೂ ನಟರಾಗಿದ್ದು ಮುಂದೆ ತಮ್ಮದೇ ನಾಟಕ ಸಂಸ್ಥೆ ಕಟ್ಟಿಕೊಂಡ ಶ್ರೀ ರಂಗನಾಥ ಭಟ್ಟರಿಗೆ, ಅವರ ಸಂಸ್ಥೆಗೆ ಅಗ್ರ ತಾಂಬೂಲ ಸಲ್ಲಬೇಕು; ಸಂಗೀತ ಅಭಿನಯಾದಿಗಳಲ್ಲಿ ಶ್ರೀ ವರದಾಚಾರ್ಯರನ್ನು ನೆನಪಿಗೆ ತರುವ ಈ ನಟ ಶ್ರೇಷ್ಠರು ಹಳೆಯ ರೀತಿಯಲ್ಲಿ ಪಳಗಿದ್ದರೂ ಹೊಸ ರೀತಿಗೆ ಹೊಂದಿಸಿಕೊಂಡು ಈ ಜಿಲ್ಲೆಯಲ್ಲಿಯೂ, ಸಂಚರಿಸಿದ ಕರ್ಣಾಟಕದ ಇತರ ಭಾಗಗಳಲ್ಲಿಯೂ ನಮ್ಮ ಸಂಸ್ಥೆಗಳು ಅಭಿಮಾನ ಪಡತಕ್ಕ, ಜಿಲ್ಲೆ ಹೆಮ್ಮೆ ಪಡತಕ್ಕ ಕೀರ್ತಿಯನ್ನೇ ಸಂಪಾದಿಸಿದರು. ಇಂಥ ಒಂದು ಸಂಸ್ಥೆಯೂ ಉಳಿಯದೆ ಹೋಯಿತೆಂಬುದು ನಮ್ಮೂರ ನಾಟಕ ಸಂಸ್ಥೆಗಳ ದುರ್ವಿಧಿ"

—(ರಾಷ್ಟ್ರಬಂಧು: ಬೆಳ್ಳಿಹಬ್ಬದ ಸಂಚಿಕೆ ೧೯೫೪)

o o o o

ಭೀಮರಾಯರ ಇನ್ನೊಂದು ಹುಚ್ಚು ಯಕ್ಷಗಾನ. ಯಕ್ಷಗಾನದ ಹುಚ್ಚು ಹಿಡಿಯದವರೇ ನಮ್ಮಲ್ಲಿ ವಿರಳ. ಚಿಕ್ಕಂದಿನಿಂದಲೂ ಭೀಮರಾಯರಿಗೆ ಬಯಲಾಟ ನೋಡುವುದೊಂದು ಗೀಳು. "ಉಡುಪಿಯ ಆಸುಪಾಸಿನಲ್ಲಾಗುತ್ತಿದ್ದ ದಶಾವತಾರದ ಬಯಲಾಟಗಳು ಹಲವಕ್ಕೆ ಕವಿಯೂ ನಮ್ಮಣ್ಣನೂ ನಾನೂ ಒಟ್ಟಿಗೆ ಹೋಗಿ ಬರುತ್ತಿದ್ದೆವು" ಎಂದು ನಂದಳಿಕೆಯವರ ಕುರಿತು ಹೇಳುವಾಗಲೆಲ್ಲ ಅವರು ಹೇಳಿದ್ದಾರೆ. ಯಕ್ಷಗಾನದ ಕುರಿತು ಕೆಲವಾದರೂ ಅವರ ಉತ್ತಮ ಲೇಖನಗಳು ಕಂಠೀರವದಲ್ಲಿ ಮತ್ತು ಇತರೆಡೆಗಳಲ್ಲಿ ಆಗಾಗ್ಗೆ ಪ್ರಕಟವಾಗಿವೆ. ಕಲೆಗೆ ಎಲ್ಲಿ ಏನು ಅಪಚಾರವಾದರೂ ಭೀಮರಾಯರು ಅದನ್ನು ಸಹಿಸರು. ತನ್ನ ಹರಿತವಾದ ಲೇಖನಿಯಿಂದ ಅದನ್ನು ಖಂಡಿಸುತ್ತಿದ್ದರು–೧೯೬೧ರಲ್ಲಿ ಪ್ರಕಟವಾದ "ನಮ್ಮ ಅಜಪುರ" ಕೃತಿಗೆ ಶ್ರೀಯುತರು ಒಂದು ಲೇಖನವನ್ನು ಕಳಿಸುತ್ತಾ ಹೀಗೆ ಬರೆದಿದ್ದರು–

"ಇದರಲ್ಲಿ ಬ್ರಹ್ಮಾವರಕ್ಕೆ ಸಂಬಂಧಿಸಿದ ಈ ಶತಮಾನದ ಕಲಾವಿದರ ಕೆಲವರ ಹೆಸರುಗಳ ಸೂಕ್ಷ್ಮ ಪರಿಚಯ ಕೊಡುವುದಕ್ಕಷ್ಟೇ ಸಾಧ್ಯವಾಗಿದೆ. ಹಿಂದಿನ ಶತಮಾನದ ಅಂತ್ಯದಲ್ಲಿ ಶ್ರೀ ನಂದಳಿಕೆಯವರ ಜೊತೆಯಲ್ಲಿದ್ದು ನಾನು ನೋಡಿದ ಇತರ ನಮ್ಮ ಕಲಾವಿದರ ಹೆಸರನ್ನಾದರೂ ಹೇಳಲು ಈ ಲೇಖನದಲ್ಲಿ ಅವಕಾಶವಿಲ್ಲದೆ ಹೋಗಿರುವುದು ಸಹಜವಾಗಿದೆ. ಕಲಾವಿದರನ್ನೆಲ್ಲ ನೋಡಿದ ವೃದ್ಧರು ಈಗಲೂ ಬಹು ಮಂದಿ ಇದ್ದಾರು..."

ಈ ಜಿಲ್ಲೆಯ ಹಿಂದಿನ ವೇಷಧಾರಿಗಳಾಗಿದ್ದ ಗತಿಸಿದ ಉಪ್ಪಳ್ಳಿ ಶೇಷಣ್ಣನವರ ಅಭಿನಯ–ಅವರು ತನ್ನ ಅಭಿನಯದಿಂದ ನಟಶ್ರೇಷ್ಠ ದಿ| ವರದಾಚಾರ್ಯರ ಮೇಲೆ ಮಾಡಿದ

ಪರಿಣಾಮ, ದಿ|| ಗಣಪತಿ ಪ್ರಭುಗಳ ವೇಷಗಾರಿಕೆ, ಇವರ ಕುರಿತು ಶ್ರೀ ವಿ. ರಾಘವನ್ ಆಡಿದ ಮೆಚ್ಚಿಗೆಯ ನುಡಿಗಳು, ಶ್ರೀ ವೀರಭದ್ರನಾಯಕರ ಕಲಾಭಿಜ್ಞತೆ, ತಾಳಮದ್ದಳೆಯ ಅರ್ಥಗಾರಿಕೆಯಲ್ಲಿ ಪ್ರಸಿದ್ಧರಾಗಿದ್ದ ದಿ| ತೆಕ್ಕಟ್ಟೆ ಬಾಬಣ್ಣ ಶ್ಯಾನುಭಾಗರು (ವೇಷಧಾರಿಗಳೂ ಆಗಿದ್ದರು), ಬಿರ್ತಿ ರಾಮ ಚಂದ್ರ ಶಾಸ್ತ್ರಿಗಳು, ಮಟ್ಪಾಡಿ ಕೃಷ್ಣಯ ಶೆಟ್ಟರು, ಇವರುಗಳ ವಾಕ್ಚಾತುರ್ಯ, ಯಕ್ಷಗಾನಾಚಾರ್ಯರಾಗಿದ್ದ ದಿ| ಶೇಷಗಿರಿ ಕಿಣಿ ಭಾಗವತರ ಕಂಠಶ್ರೀ–ಮುಂತಾಗಿ ಹಲವು ಹಿರಿಯ ಕಲಾ ವಿದರುಗಳ ಮತ್ತು ಅವರ ಪ್ರತಿಭೆಯ ನೆನಪನ್ನು ಈ ಲೇಖನ ದಲ್ಲಿ ನಮಗೆ ಶ್ರೀ ಭೀಮರಾಯರು ಮಾಡಿಕೊಟ್ಟಿದ್ದಾರೆ. ಯಕ್ಷಗಾನ ಕ್ಷೀಣಿಸುತ್ತಿರುವ ಕುರಿತು ಶ್ರೀ ಭೀಮರಾಯರು ಅದೇ ಲೇಖನದಲ್ಲಿ ತನ್ನ ಆತಂಕವನ್ನು ಹೀಗೆ ವ್ಯಕ್ತ ಪಡಿಸಿ ದ್ದಾರೆ:

"ಈ ಕಲೆ ಈಗೀಗ ಕ್ಷೀಣಿಸುತ್ತಿದೆ. ಕಲಾವಿದರ ಕಷ್ಟ ಜೀವನ ಇಷ್ಟ ಜೀವನವಾಗಿ ಮಾರ್ಪಡುತ್ತಿದೆ. ಹಳೆ ಸಂಪ್ರದಾ ಯವನ್ನು ಒಂದೊಂದಾಗಿ ಕೈ ಬಿಡುತ್ತ ಬರುವ ಈ ಮನೋ ದೌರ್ಬಲ್ಯ ಅಧಿಕವಾಗುತ್ತಿದೆ. ಹಳೆ ಕ್ರಮವನ್ನೇಕೆ ಅನುಸರಿಸ ಬಾರದೆನ್ನುವ ಪ್ರಶ್ನೆಗೆ ಏಕೆ ಅನುಸರಿಸಬೇಕೆನ್ನುವ ಇನ್ನೊಂದು ಪ್ರಶ್ನೆಯೇ ಉತ್ತರವಾಗುತ್ತದೆ. ಮನಸ್ಸಿಗೆ ಬಂದದ್ದೋ ದುಡ್ಡಿಗೆ ಅನುಕೂಲವಾದದ್ದೋ 'ಸುಧಾರಣೆ' ಎನಿಸುತ್ತದೆ. ಕಲಾರಕ್ಷ ಣೆಯ ಗೊಡವೆ ಇಲ್ಲದೆ ಜನರಂಜನೆಯ ಮಾರ್ಗ ಮಾತ್ರ ಹುಡು ಕಲಾಗುತ್ತಿದೆ. ಆಟದ ರಂಗಸ್ಥಳದಲ್ಲಿ ಕೆಲವು ನಾಟಕದ ವೇಷ ಕುಣಿಯುತ್ತಿದೆ. ಡೇರೆ ಆಟಗಳಿಂದ ನರ್ತನ ಕಲೆ ಅಳಿಯುತ್ತ ಬಂದಿದೆ. ಭಾಷೆ ಮತ್ತು ಪುರಾಣ ಸಾಹಿತ್ಯಗಳ ಉಚಿತ ಪ್ರಚಾರ

ಪ್ರದರ್ಶನ ಸಂಸ್ಥೆಗಳು ಕೆಲವು ಯಕ್ಷಗಾನದಂಥ ಪುರಾತನ ಕಲೆಯನ್ನೂ ಮಾರಿ ತಿನ್ನುವುದಕ್ಕೆ ಹಿಂಜರಿಯದ ಒಂದು ಸಂತೆಯ ರೂಪಕ್ಕೆ ತಿರುಗುತ್ತಿವೆ. ನಾಟಕದವರೋ ಸಿನೆಮದವರೋ ಯಕ್ಷಗಾನದಿಂದ ಎಳ್ಳಷ್ಟಾದರೂ ಆಯ್ದುಕೊಳ್ಳದಿದ್ದರೂ ಅವುಗಳಿಂದಲೇ ಕದ್ದೋ ಕೆಟ್ಟೋ ಎರವು ತಂದೋ ಸಾಧ್ಯವಿರುವಷ್ಟು ಯಕ್ಷಗಾನದಲ್ಲಿ ತುಂಬಿ ಆ ಹೆಸರಿನ ದುರುಪಯೋಗವಾಗುತ್ತಲೇ ನಡೆದಿದೆ. ಪ್ರಸಂಗದ ಕಥೆಯು ಕಾಲ ಮತ್ತು ಕವಿಯ ಆಶ್ರಯ, ಇವನ್ನು ನಿರ್ಲಕ್ಷಿಸಿ, ಪಾತ್ರಾಪಾತ್ರಗಳ ಇತಿಮಿತಿ ಮೀರಿ ಸ್ವೇಚ್ಛೆಯಿಂದ, ಮಾತನಾಡುವ ಪದ್ಯದ ಅರ್ಥ ವಿವರಣೆ ಸಭಾ ರಂಗವನ್ನು ವಾಗ್ಯುದ್ಧದ ಕಳವಾಗಿ ಮಾರ್ಪಡಿಸುವ, ಆ ಕಳದಲ್ಲಿ ಸೋಲು ಗೆಲವುಗಳ ಪಂಥ ಕಟ್ಟಿ ಪರಸ್ಪರ ಹೀನ ನುಡಿಯಾಡಿಕೊಳ್ಳಲೂ ವೈಯಕ್ತಿಕ ಟೀಕಾಸ್ತ್ರಗಳನ್ನೆಸೆಯಲೂ ಹೇಸದ, ಕೆಲ ವೇಳೆ ಸಂಬಂಧವೇನೂ ಇಲ್ಲದ ರಾಜಕೀಯವನ್ನು ತಂದು ಹಾಕಿ ಗಂಟಿಕಟ್ಟಲಿ ಹರಟುವ ಈ ಹೇಯ ಪ್ರವೃತ್ತಿ ತಾಳ ಮದ್ದಲೆ ಕೂಟ ಕೆಲವದರಲ್ಲಿ ಕಂಡು ಬಂದಿದೆ. ಬಯಲಾಟಗಳ ಅಭಿಮಾನಿಗಳನೇಕರು ಇರುವುದರಿಂದ ಅವರ ಕಣ್ಣಿಗೆ ಮಣ್ಣೆರಚಲು 'ಯಕ್ಷಗಾನ'ದ ಹೆಸರನ್ನಷ್ಟೇ ವ್ಯವಹಾರ ದೃಷ್ಟಿಯಿಂದ ನಿರ್ವಾಹವಿಲ್ಲದೆ ಉಪಯೋಗಿಸುತ್ತಿರುವಂತೆ ತೋರುತ್ತದೆ. ಇದು ಪ್ರಕೃತ ಸ್ಥಿತಿ."

ಶ್ರೀ ಭೀಮರಾಯರು ಯಕ್ಷಗಾನದ ಕಡು ಅಭಿಮಾನಿಗಳು. ಅದರ ಕ್ಷೀಣ ಸ್ಥಿತಿಯನ್ನು ಅವರು ಎಂದೂ ಸಹಿಸರು ಎಂಬುದಕ್ಕೆ ಮೇಲಿನ ಮಾತುಗಳೇ ದೃಷ್ಟಾಂತ. ರಾತ್ರಿಂ ಬೆಳಗು ಆಟ ನೋಡುವುದಲ್ಲದೆ ಬಣ್ಣದ ಚೌಕಕ್ಕೂ ಹೋಗಿ ವ್ಯವಸಾಯಿಗಳೊಡನೆ ಉಭಯಕುಶಲೋಪರಿ ಮಾತುಕತೆ ನಡೆಸಿ ಬರು

ತ್ತಿದ್ದರು. ಹಲವು ಯಕ್ಷಗಾನದ ವ್ಯವಸಾಯಿಗಳೊಡನೆ ಇವರು ಬಹು ಸಲುಗೆಯಿಂದ ವರ್ತಿಸುತ್ತಿದ್ದರು.

o o o o

೧೯೭೪ರಲ್ಲಿ ನಮ್ಮ ಸಂಘ 'ಹಾರಾಡಿರಾಮ' ಸ್ಮಾರಕ ಸಂಚಿಕೆ ಪ್ರಕಟಿಸಿತು. ಸಂಪಾದಕನಾಗಿ ನಾನು ಶ್ರೀ ಭೀಮರಾಯರೊಡನೆ ಒಂದು ಲೇಖನ ಬೇಡಿದೆ- ಆಗ ಭೀಮರಾಯರು ಸಾಕಷ್ಟು ಜೀರ್ಣರಾಗಿದ್ದರು. ಬರೆಯಲು ಕೈ ನಡುಗುತ್ತಿತ್ತು— ಆದರೂ ತನ್ನ ನೆಚ್ಚಿನ ರಾಮ, ತಾನು ಮೆಚ್ಚಿದ ಆತನ ವೇಷಾಭಿನಯಗಳು- ಇವನ್ನು ಅವರು ಹೇಳಲೇಬೇಕಿತ್ತು. ನಾಲ್ಕು ದಿನದ ಅವಕಾಶ ತೆಗೆದುಕೊಂಡು ಹಾರಾಡಿ ರಾಮನ ಬಗ್ಗೆ ಬಹು ಒಳ್ಳೆಯ ಮಾತನ್ನೇ ಹೇಳಿ ಲೇಖನ ಬರೆದು ಕಳುಹಿಸಿದರು.

“ರಾಷ್ಟ್ರ ಪ್ರಶಸ್ತಿ ಪಡೆದು ಬಯಲಾಟದ ಜನಪದ ಕಲೆಗೆ ಮಹೋನ್ನತ ಸ್ಥಾನವನ್ನು ಗಳಿಸಿಕೊಟ್ಟ ಹಾರಾಡಿ ರಾಮನಂಥವರು ಹಿಂದೆ ಕನ್ನಡ ರಾಜ್ಯದಲ್ಲಿ ಹುಟ್ಟಲಿಲ್ಲ, ಮುಂದೆ ಹುಟ್ಟಲಾರರು. ಇದೇ ಹಾರಾಡಿ ರಾಮನನ್ನು ಅವನ ಹಲವು ವೇಷಗಳನ್ನು ಕಂಡ ನನ್ನ ಅಖಂಡ ಸಿದ್ಧಾಂತ. ಸುಧನ್ವನ ಸಿರಿ ಮುಡಿಯ ವೇಷ, ಕರ್ಣನ ದೊಡ್ಡ ಮುಂಡಾಸಿನ ವೇಷ, ಕಿರಾತನ ಕೋರೆ ಮುಂಡಾಸಿನ ವೇಷಗಳಲ್ಲಿ ಯಾವದನ್ನೇ ಆತ ಮಾಡಿದರೂ ಸರಿ; ಅದು ಬಹು ಅಚ್ಚುಕಟ್ಟಾಗಿ ಆಚಾರ ಬದ್ಧವಾಗಿರುತ್ತಿತ್ತು. ಉಂಗುರ ಹಾಕಿ ಉಂಗುರ ತೆಗೆಯುವಂತಹ ವೇಷ ಈತನದ್ದು. ನರ್ತನದಲ್ಲಿ ಅಭಿನಯದಲ್ಲಿ ಈತನಿಗೆ ಸರಿಸಾಟಿ ಇಲ್ಲ. ಅವೆಲ್ಲದರಲ್ಲಿಯೂ ಪರಿಪೂರ್ಣತೆಯನ್ನು ಪಡೆದಿದ್ದ—”

“ಹಾರಾಡಿ ರಾಮ” ಸಂಚಿಕೆ ಪ್ರಕಟವಾಗಿ ಅದು ಅವರ

ಕೈಸೇರಿದ ಮೇಲೆ ನಮ್ಮನ್ನು ಹರಸಿ ಅವರು ಬರೆದ ಮಾತು ಗಳು ಇವು:

'ಬಯಲಾಟಗಳ ಇತಿಹಾಸದಲ್ಲಿ ಶ್ರೀ ರಾಮಗಾಣಿಗರ ಹೆಸರು ಚಿರಸ್ಥಾಯಿಯಾಗಿ ಉಳಿಯುವಂತೆ ಈ ಸಂಚಿಕೆ ಮಾಡಿದೆ ಎಂದು ನನ್ನ ಅನುಭವಕ್ಕೆ ಬಂದಿದೆ. ತಮ್ಮ ಸಂಚಿಕೆ ಸರ್ವಾಂಗ ಸುಂದರವಾಗಿ ಸರ್ವೋತ್ಕೃಷ್ಟವಾಗಿದೆ; ಅದು ತಮ್ಮ ಸಂಘವು ಪ್ರತ್ಯೇಕವಾಗಿ ತಾವು ಕೈಗೊಂಡ ಶ್ರಮ ಸಾಹಸದ ಪ್ರತಿಧ್ವನಿ ಯಾಗಿದೆ."

○ ○ ○ ○

ಕಬ್ಬಿಗರ ಬಲ್ಲಹನಾದ ಕವಿ ಮುದ್ದಣನನ್ನು ಕಂಡಿದ್ದೇನೆ ಎನ್ನುವ ಶ್ರೀ ಹುರುಳಿ ಭೀಮರಾಯರು ಈ ದಶಕದ ಆದಿಯ ತನಕ ನಮ್ಮ ಮುಂದೆ ಇದ್ದವರು. ನಂದಳಿಕೆ ಲಕ್ಷ್ಮೀನಾರಣಪ್ಪನೇ ಮುದ್ದಣನೇ? ಎಂಬ ವಾದ ಒಂದು ಕಾಲದಲ್ಲಿ ಪ್ರಚಾರದಲ್ಲಿ ದ್ದಾಗ,ಕವಿಯ ಚಿರಪರಿಚಿತರಾಗಿದ್ದ ಶ್ರೀ ನಂದಳಿಕೆಯವರು ಕಬ್ಬಿ ಗರಬಲ್ಲಹನಾದ ಮುದ್ದಣನೂ ನಮ್ಮನಂದಳಿಕೆ ಲಕ್ಷ್ಮೀನಾರಣಪ್ಪ ನವರೇ—ಎಂಬಲ್ಲಿ ಯಾವ ಸಂದೇಹವೂ ಉಳಿದಿಲ್ಲ—'ಅದ್ಭುತ ರಾಮಾಯಣ', 'ಶ್ರೀರಾಮ ಪಟ್ಟಾಭಿಷೇಕ' ಮತ್ತು 'ರಾಮಾ ಶ್ವಮೇಧ ಕೃತಿಗಳ ಕರ್ತೃ ಅವರೇ ಎಂಬುದರಲ್ಲಿ ಯಾವ ಅನು ಮಾನ್ಯವೂ ಇಲ್ಲ ಎಂದು ಘಂಟಾಘೋಷವಾಗಿ ಸಾರಿದವರು ಶ್ರೀ ಭೀಮರಾಯರು.

ಹಳಗನ್ನಡ ಹೊಸಗನ್ನಡ ವಾಙ್ಮಯ ಪ್ರಪಂಚದಲ್ಲಿ ಕೀರ್ತಿ ಶರೀರದಿಂದ ಬಾಳಿ ಬೆಳಗುತ್ತಿರುವ ನಮ್ಮ ನಂದಳಿಕೆ ಲಕ್ಷ್ಮೀನಾರ್ಣಪ್ಪಯ್ಯ ಅಥವಾ ಮುದ್ದಣ್ಣ ಮಹಾಕವಿಯ

ಸಂಪರ್ಕ, ಸಹವಾಸ ಚಿಕ್ಕವನಾದ ತನಗೆ ಕೆಲಕಾಲವಾದರೂ ಲಭಿಸುವಂತಾದುದು ತನ್ನ ಜೀವಮಾನದಲ್ಲಿ ಅನಾಯಾಸವಾಗಿ, ಅಪ್ರಾರ್ಥಿತವಾಗಿ ಒದಗಿ ಬಂದ ಮಹಾಯೋಗ ಎಂದು ಶ್ರೀ ಭೀಮರಾಯರು ತಿಳಿದಿದ್ದರು.

ಕವಿ ಮುದ್ದಣನ ಕುರಿತು ಭೀಮರಾಯರ ಹಲವು ಲೇಖನಗಳು, ಹೇಳಿಕೆಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಮುದ್ದಣನಿಗೂ ತನ್ನ ಅಣ್ಣನಿಗೂ ಇದ್ದ ಸ್ನೇಹ—ಆ ಕಾರಣದಿಂದ ಕವಿಯು ತಮ್ಮಲ್ಲಿಗೆ ದಿನಕ್ಕೆ ಎರಡು ಮೂರು ಬಾರಿ ಬರುತ್ತಿದ್ದುದು – ನಂದಳಿಕೆಯವರಲ್ಲಿದ್ದ ಪುಸ್ತಕಗಳ ಸಂಗ್ರಹ–ಅವರ ಮೇಲೆ ಯಕ್ಷಗಾನ ಬೀರಿದ ಪ್ರಭಾವ–ಅವರ ಸಂಗೀತದ ಜ್ಞಾನ, ನಂದಳಿಕೆಯವರು ಬಯಲಾಟದಲ್ಲಿ ಉನ್ನತ ಮಟ್ಟದ ಹಾಸ್ಯಕ್ಕೆ ಪೆರ್ಡೂರು ಕೃಷ್ಣಪ್ಪನನ್ನು ತಯಾರು ಮಾಡಿದ ಸಂಗತಿ–ನಂದಳಿಕೆಯವರ ಸಂಸಾರ – ಇವೆಲ್ಲದರ ಬಗೆಗೆ ತನಗಾದ ಪ್ರತ್ಯಕ್ಷ ಅನುಭವವನ್ನು ಅಧಿಕಾರ ವಾಣಿಯಿಂದ ಶ್ರೀ ಭೀಮರಾಯರು ತನ್ನ ಲೇಖನಗಳಲ್ಲಿ ಭಾಷಣಗಳಲ್ಲಿ ಹಲವೆಡೆ ಹೇಳಿದ್ದಾರೆ. ಮುದ್ದಣನ ಕುರಿತು ಇವರ ಒಂದು ರೇಡಿಯೋ ಸಂದರ್ಶನವೂ ೧೯೫೭ರಲ್ಲಿ ನಡೆಯಿತು.

"ಮುದ್ದಣ ಕವಿಯನ್ನು ನಾನು ಕಂಡದ್ದು ೧೮೯೭ರಲ್ಲಿ. ಅವರೊಡನೆ ಒಡನಾಡಿದ್ದು ಪೂರ್ತಿ ನಾಲ್ಕು ವರ್ಷ. ೧೮೯೭ರಿಂದ ೧೮೯೯ ಇಸವಿ ತನಕ........ ನಾನು ಅವರ ಮನೆಗೆ ಹೋಗಿ ಬರುತ್ತಿದ್ದ ಆ ದಿನದಲ್ಲಿ ಅವರ ಮೇಜಿನ ಮೇಲೊಂದು

ಕರಡು ಪ್ರತಿ ಇರುತ್ತಿತ್ತು. ಅದೇ ರಾಮಾಶ್ವಮೇಧದ ಪ್ರತಿ...."
(ಭೀಮರಾಯರ ರೇಡಿಯೊ ಸಂದರ್ಶನದಿಂದ)

o o o o

೧೮೮೯ರಲ್ಲಿ ಜನಿಸಿದ ಶ್ರೀ ಭೀಮರಾಯರಿಗೆ, ಕವಿಯ ಒಡನಾಟ ಒದಗುವಾಗ ಇವರ ಪ್ರಾಯ ಏಳು ವರ್ಷ; ಈ ಚಿಕ್ಕ ವಯಸ್ಸಿನಲ್ಲೇ ಅರೇಬಿಯನ್ ನ್ಯಾಟ್ಸ್ ಪುಸ್ತಕ, ಶೃಂಗಾರ ಶುಕ ಸಪ್ತತಿ, ಶಬ್ದ ಮಣಿ ದರ್ಪಣ, ಛಂದಸ್ಸು, ಅಲಂಕಾರ ಶಾಸ್ತ್ರ, ಕಿಟೆಲ್ ನಿಘಂಟು ಇತ್ಯಾದಿ ಗ್ರಂಥಗಳು ನಂದಳಿಕೆಯವರಲ್ಲಿದ್ದುವು ಎಂದು ಹೇಳುವ ಶಕ್ತಿ ಹೇಗೆ—ರಾಮಾಶ್ವಮೇಧದ ಕೃತಿಯ ಪರಿಚಯವಾದರೂ ಇವರಿಗೆ ಹೇಗೆ-ಎಂದು ಮುಂತಾಗಿ ಭೀಮರಾಯರ ಹೇಳಿಕೆ ಹಲವರಲ್ಲಿ ಸಂದೇಹ ಮೂಡುವಂತೆ ಮಾಡಿತ್ತು. ಒಬ್ಬಿಬ್ಬ ಹಿರಿಯ ಸಾಹಿತಿಗಳೇ ನನ್ನೊಡನೆ ಈ ಕುರಿತು ಪ್ರಶ್ನಿಸಿದ್ದರು.

ಬಹು ಮಟ್ಟಿಗೆ ಈ ಅಂಶಗಳನ್ನು ಶ್ರೀ ಭೀಮರಾಯರು ಅವರ ಅಣ್ಣನೂ ಹಾಗೂ ನಂದಳಿಕೆಯವರ ಸಮಕಾಲೀನರೂ, ಸಮವಯಸ್ಕರೂ, ಸ್ನೇಹಿತರೂ ಆಗಿದ್ದ ಶ್ರೀ ಹುರುಳಿ ವೆಂಕಟ ಸುಬ್ಬರಾಯರಿಂದ ಸಂಗ್ರಹಿಸಿದರು ಎಂಬಷ್ಟಕ್ಕೇ ನಾವು ಸಮಾಧಾನ ತಾಳಬೇಕು. ಆದರೆ ನಂದಳಿಕೆಯವರನ್ನು ಬಾಲ್ಯದಲ್ಲಿ ಕಂಡದ್ದು; ಅವರ ಹತ್ತಿರದಲ್ಲೇ ಓಡಾಡಿದ್ದು ಎಂಬುದಷ್ಟು ಖಚಿತ.

ನಂದಳಿಕೆಯವರಿಗೂ ಶ್ರೀ ಭೀಮರಾಯರಿಗೂ ಇದ್ದ ಸಂಪರ್ಕದ ರೀತಿಯನ್ನು ಭೀಮರಾಯರೇ ಹೀಗೆ ಹೇಳಿದ್ದಾರೆ: "ಉಡುಪಿಯ ಆಸುಪಾಸಿನಲ್ಲಾಗುತ್ತಿದ್ದ ದಶಾವತಾರದ ಬಯಲಾಟಗಳು ಹಲವಕ್ಕೂ ಕವಿಯೂ ನಮ್ಮಣ್ಣನೂ ನಾನೂ

ಒಟ್ಟಿಗೆ ಹೋಗಿ ಬರುತ್ತಿದ್ದೆವು. ಹಿಂದಿರುಗುವಾಗ ಆ ವೇಷ ಹೇಗಿತ್ತು ಈ ವೇಷ ಹೇಗಿತ್ತು ಎಂದು ಮುಂತಾಗಿ ವಿನೋದ ಕ್ಕಾಗಿ ನನ್ನೊಡನೆ ಕೇಳುತ್ತಿದ್ದರು ನಂದಳಿಕೆಯುವರು........ ನಮ್ಮ ಮನೆಯಲ್ಲಿ ಆಗುವ ಎಲ್ಲ ಹಬ್ಬ ಹುಣ್ಣಿಮೆಗಳಿಗೂ ನಂದಳಿಕೆಯವರಿಗೆ ಊಟಕ್ಕೆ ಹೇಳಿ ಬಾ" ಎಂದು ನನ್ನನ್ನು ಅಟ್ಟುವರು ಹಿರಿಯರು. ("ನಡೆದು ಬಂದ ದಾರಿ"ಯಲ್ಲಿ)ಕವಿಯ ಈ ಸಾನ್ನಿಧ್ಯದ ಸಂಸ್ಕಾರ ಇವರಲ್ಲಿ ಬಹುಮಟ್ಟಿಗೆ ಆಗಿದೆ ಎಂಬು ದಕ್ಕೆ ಅನ್ಯ ನಿದರ್ಶನ ಅನಾವಶ್ಯಕ.

o o o o

೧೯೬೦ರಲ್ಲಿ ಮಣಿಪಾಲದ ಸಾಹಿತ್ಯ ಸಮ್ಮೇಳನದ ಮುದ್ದಣ ಮಂಟಪಕ್ಕೆ ಆಗಮಿಸಿದ ಹಿರಿಯ ಕಿರಿಯ ಸಾಹಿತಿ ಗಳು ಉಡುಪಿಯ ಕೃಷ್ಣನನ್ನು ಸಂದರ್ಶಿಸುವುದರ ಜೊತೆಗೆ ಕವಿ ಮುದ್ದಣ ಆಗಾಗ್ಗೆ ಬಂದು ಹೋಗುತ್ತಿದ್ದ ಹುರುಳಿ ಸುಬ್ಬರಾ ಯರ ಮನೆಯನ್ನು ಸಂದರ್ಶಿಸಿದರಲ್ಲದೆ ಕವಿಯನ್ನು ಕಂಡ — ಕವಿಯ ನಿಕಟಾನುವರ್ತಿ ಶ್ರೀ ಹುರುಳಿ ಭೀಮರಾಯರ ಸತ್ಕಾ ರವನ್ನು ಸ್ವೀಕರಿಸಿ ಅವರನ್ನು ವಂದಿಸಿ ಅವರ ಆಶೀರ್ವಾದ ಪಡೆದು ಹಿಂತಿರುಗಿದರು.

ನಂದಳಿಕೆಯವರನ್ನು ಕಂಡವರು ಬಹಳ ಮಂದಿ ಇದ್ದಿರ ಬಹುದು -- ಈತ ಓರ್ವ ಮಹಾಕವಿ ಎಂದು ಗುರುತಿಸಿ ಜನತೆಗೆ ಹೇಳಿದವರು ಭೀಮರಾಯರು. ಕವಿಯನ್ನು ಕಂಡೆ ಎಂದು ಹೇಳಿದ ಭೀಮರಾಯರು ಮಾತ್ರ ಇನ್ನು ನಮ್ಮ ಮುಂದೆ ಇಲ್ಲ.

— ೬ —

ಸಾಹಿತ್ಯ, ಪತ್ರಿಕೋದ್ಯಮ ಇವು ಭೀಮರಾಯರ ಎರಡು ಮುಖಗಳು. ಭೀಮರಾಯರ ಮಟ್ಟಿಗೆ ಪತ್ರಿಕೋದ್ಯಮವೂ ಸಾಹಿತ್ಯವೇ ಆಗಿತ್ತು. ಆದ್ದರಿಂದಲೇ ಇವರು ಸಾಹಿತಿ—ಪತ್ರಿಕೋದ್ಯಮಿಗಳು, ಜನಮನವನ್ನು ಕಟ್ಟಿದವರು. ಕೆಲವೇ ಆದರೂ ಉತ್ತಮ ಕೃತಿಗಳನ್ನು ರಚಿಸಿ ನಾಡದೇವಿಯ ತೊಡುಗೆಯಾಗಿ ಅರ್ಪಿಸಿದ ಶ್ರೀ ಭೀಮರಾಯರ ತಲೆ ಬೀಗಲಿಲ್ಲ—ಬಾಗಿದೆ. ತಾನು ಸಾಹಿತ್ಯ ರಚನೆಗೆ ಕೈ ಹಾಕಿದ ಬಗೆಗೆ ನಮ್ರತೆಯಿಂದ (ಪಾಪ ಪುಣ್ಯದ ಕೃತಿಯಲ್ಲಿ) ಅವರೇ ಹೀಗೆ ಹೇಳಿದ್ದಾರೆ:

"ನಾನೇನೂ ಕನ್ನಡದಲ್ಲಿ ಸಾಕಷ್ಟು ನುರಿದವನಲ್ಲ. ಗ್ರಂಥ ರಚನೆಗೆ ಬೇಕಾದ ಸಾರ್ಥಕ ಶಬ್ದ, ಸಂಪ್ರದಾಯ, ಪದಗಳ ಸಂಗ್ರಹವಾಗಲೀ, ಯಥಾಯೋಗ್ಯವಾದ, ಭಾಷಾ ವ್ಯಾಕರಣ ಜ್ಞಾನವಾಗಲೀ ನನ್ನಲ್ಲಿ ಇಲ್ಲ. ಆದರೂ ಕನ್ನಡ ನಾಡಿನಲ್ಲಿ ಹುಟ್ಟಿ ಕನ್ನಡಿಗನಾಗಿ ಬೆಳೆದುದಕ್ಕೆ ಏನಾದರೊಂದು ಬಗೆಯಿಂದ ಕನ್ನಡ ವಾಣಿಯನ್ನು ಸೇವಿಸಿಯೇ ತೀರಬೇಕೆಂಬ ಇದೊಂದು ದೊಡ್ಡ ಹುಚ್ಚು ನನಗೆ. ಅದೇ ನಾನು ಗ್ರಂಥರಚನೆಗೆ ಸಂಬಂಧಪಟ್ಟ ಮುದ್ರಣಾದಿ ವೆಚ್ಚಗಳಿಗೆ ಸಂಬಂಧ ಪಟ್ಟ ಯಾವ ಸನ್ನಯೋಗ್ಯತಾ ಪರೀಕ್ಷೆಯ ಗೊಡವೆಗೂ ಹೋಗದೆ ಇಷ್ಟೊಂದು ದೊಡ್ಡ ಭಾರವನ್ನು ಒಮ್ಮೆಯೇ ಹೊರಲು ಸಾಹಸ ಮಾಡಿದುದಕ್ಕಾಗಿ ಸದಯ ಸಹೃದಯರಾದ ಕನ್ನಡಿಗರೆಲ್ಲರೂ ಮನ್ನಿಸುವರೆಂದು ನಂಬಿರುವೆನಲ್ಲದೆ, ನನ್ನ ಅಜ್ಞಾನ ವಶದಿಂದ ಉಂಟಾದ ಲೋಪದೋಷಗಳನ್ನು ಪಂಡಿತ ಮಾನ್ಯರು ತೋರಿ, ಉಪಕರಿಸುವ ಸಂದರ್ಭದಲ್ಲಿ—

ಅವುಗಳನ್ನು ಆದರ ಪೂರ್ವಕವಾಗಿ ಸ್ವೀಕರಿಸಿ ಮುಂದಿನ ಮುದ್ರಣದಲ್ಲಿ ಪರಿಷ್ಕರಿಸಿ ಬರೆವೆನೆಂದೂ ವಿಜ್ಞಾಪಿಸಿಕೊಳ್ಳುತ್ತೇನೆ'.

o o o o

ತಾರಾ (ಐತಿಹಾಸಿಕ ಕಾದಂಬರಿ ಪುಟ ೨೪-೧೯೧೩); ರಜಿಯಾ ಬೇಗಂ (ಪುಟ ೪೮--೧೯೪೪); ಪಾಪಪುಣ್ಯ (ಕಾದಂಬರಿ ಅನುವಾದಿತ. ೧೯೨೩); ಹಾಸನ ಟೋಪಿ (ನೀಳ್ಗತೆ-ಪುಟ ೧೫೦-೧೯೩೭); ಸ್ವಲ್ಪ ನಗಬಾರದೆ? (ತುಣುಕು ಹಾಸ್ಯ); ಪಾಪೋಸಿನ ಪಚೀತಿ; ಗುಬ್ಬಿ ಪಾಯಸ; ಗಡ್ಡದ ಅಜ್ಜಯ್ಯ (ಮೂರು ಮಕ್ಕಳ ಕತೆಗಳು ೧೯೩೫); ಮುರುಕು ದಂಬೂಕು (ಪುಟ ೨೩೬—೧೯೪೭); ಆಧುನಿಕ ಭಾರತ; (ಮೂರು ನಾಟಕಗಳು, ಪುಟ ೪೨—೧೯೪೯;) ಇವಿಷ್ಟು ರಾಯರ ಪ್ರಕಟವಾದ ಕೃತಿಗಳು--(ತೆಂಕನಾಡು ಪ್ರಕಟನೆಯಿಂದ)

o o o o

"ಈ ಪುಸ್ತಕದ ಪರಿವರ್ತಕರಾದ ನನ್ನ ಮಿತ್ರಶ್ರೇಷ್ಠರು ಪ್ರಾರ್ಥಿಸಿದ ಮೇರೆಗೆ ಇದಕ್ಕೆ ಚಿಕ್ಕದೊಂದು ಮುನ್ನುಡಿಯನ್ನು ಬರೆಯಲು ಉಪಕ್ರಮಿಸುವೆನು. ಕರ್ಣಾಟಕ ಸಾಹಿತ್ಯ ಪ್ರಪಂಚದಲ್ಲಿ ಸುಪರಿಚಿತರಾಗಿಯೇ ಇರುವ ಮಂಗಳೂರು ಜಿಲ್ಲೆಯ ಈ ದೊಡ್ಡ ಮನುಷ್ಯರು 'ಅಜ್ಞಾತ'ರಾಗಿ ಹಿಂದೆ ನಿಂತು, ಮುನ್ನುಡಿಯನ್ನು ಬರೆಯಲು ನನ್ನನ್ನು ಏಕೆ ಪ್ರಾರ್ಥಿಸಿದರೋ ಅದು ನನಗೆ ತಿಳಿಯವಾಗಿದೆ. ಒಂದು ವೇಳೆಗೆ ನಮ್ಮ ಕನ್ನಡ ಜಿಲ್ಲೆಯ ಕವಿ ಶಿರೋಮಣಿಗಳಾದ ದಿವಂಗತ, ಮ| ನಂದಳಿಕೆ ಲಕ್ಷ್ಮೀ ನಾರಾಯಣರಾಯರ ರೀತಿಯನ್ನು ಅನುಸರಿಸುವುದು ತಮಗೂ ತಕ್ಕುದೆಂದು ಭಾವಿಸಿರಬಹುದು. ಅದು ಹೇಗಾದರೂ ಆಗಲಿ. ಉತ್ತಮವಾದ ವಸ್ತುವಿಗೆ ಅಷ್ಟೊಂದು ಹೆಚ್ಚಾಗಿ ಶ್ಲಾಘನೆಬೇಕಾ

ಗಿರುವುದಿಲ್ಲವಾದುದರಿಂದ ನನ್ನ ಕೆಲಸವು ಸುಲಭವಾಯಿತು ಉತ್ತಮ ತರಗತಿಗೆ ಸೇರಿದುದಾದ ಈ ಕಲ್ಪನಾ ಕಥೆಯು ಕರುಣಾರಸಪೂರ್ಣವಾದ, ಈ ಸಂಸಾರ ಚಿತ್ರವು-ಮೂಲದಲ್ಲಿ ಶ್ರೀಯುತ ದಾಮೋದರ ಮುಖ್ಯೋಪಾಧ್ಯಾಯರೆಂಬ ಕವಿಯಿಂದ ಬಂಗಾಳೀ ಭಾಷೆಯಲ್ಲಿ ಲಿಖಿತವಾಯಿತು. ಈ ಕವಿಯು ಕೂಡ ಆ ದೇಶದಲ್ಲಿ ಶ್ರೀಯುತ ಬಂಕಿಂ ಚಂದ್ರರಷ್ಟೇ ಮಹಾಜನ ಪ್ರಿಯರಾಗಿರುವರು. ಬಂಗಾಳೀ ಭಾಷೆಯಲ್ಲಿ ಈ ಗ್ರಂಥವು "ಮಾ—ಓ—ಮೆಯೆ" ಎಂಬ ಹೆಸರಿಂದಲೂ. ಶ್ರೀಯುತ ಆರ್. ಪಿ. ದೇಯವರು ಮಾಡಿದ ಇದರ ಇಂಗ್ಲಿಷ್ ಭಾಷಾಂತರವು 'Mother and Daughter' ಎಂಬ ಹೆಸರಿಂದಲೂ ಪ್ರಸಿದ್ಧವಾಗಿದೆ. ದಾಮೋದರ ಮುಖ್ಯೋಪಾಧ್ಯಾಯರ ಗ್ರಂಥಗಳೊಳಗೆ ಕನ್ನಡಕ್ಕೆ ಪರಿವರ್ತಿತವಾದುದು ಇದೇ ಮೊದಲನೆಯದಲ್ಲವೆಂದು ನೆನಪು ತೋರುತ್ತದೆ. ದಿವಂಗತ ಬಿ. ವೆಂಕಟಾಚಾರ್ಯರ ಅವಲಂಬನದ "ಮೃಣ್ಮಯಿ"ಯೆಂಬುದು ಇವರದೇ.

ಉತ್ತಮವಾದ ಶೈಲಿಯೊಡನೆ, ಮನೋಹರವಾದ ಮುದ್ರಣದೊಡನೆ, ಅಂದವಾಗಿ ಅಚ್ಚಾದ ಈ ಕನ್ನಡ ಪುಸ್ತಕವನ್ನು ನಮ್ಮ ಕನ್ನಡಿಗರು ಆದರ ಪುರಸ್ಸರವಾಗಿ ಓದಿನೋಡಿ ಪರಿವರ್ತಕರ ಶ್ರಮವನ್ನು ಸಾರ್ಥಕಗೊಳಿಸಬೇಕೆಂದು ಪ್ರಾರ್ಥಿಸುವೆನು."

ಇದು ೧೯೩೩ರಲ್ಲಿ ಪ್ರಕಟವಾದ ಶ್ರೀ ಭೀಮರಾಯರ "ಪಾಪ-ಪುಣ್ಯ"ಕ್ಕೆ ಆಗ ಮದ್ರಾಸ್ ಸರಕಾರದ ಸೀನಿಯರ್ ಟ್ರಾನ್ಸ್‌ಲೇಟರ್ ಆಗಿದ್ದ ಶ್ರೀ ಬೆನಗಲ್ ರಾಮರಾಯರು ಬರೆದ ಮುನ್ನುಡಿ.

೦ ೦ ೦ ೦

ಅಧ್ಯಾಪಕ ವೃತ್ತಿಯಿಂದಲೇ ತನ್ನ ಬದುಕನ್ನು ಆರಂಭಿಸಿದ್ದ ಶ್ರೀ ಭೀಮರಾಯರು ಆದರ್ಶ ಅಧ್ಯಾಪಕರಾಗಿಯೂ ಇದ್ದರು. ಚಿಕ್ಕ ಮಕ್ಕಳಿಗಾಗಿ ಅವರು ಬರೆದ "ಗಡ್ಡದ ಅಜ್ಜಯ್ಯ"ದ ಕೊನೆಯಲ್ಲಿ ಮಕ್ಕಳಿಗಾಗಿ ರಚಿಸಿದ ಬಾಯ್ದೆರೆಯ ವರ್ಣನೆ: ವಾಕ್ಯರಚನೆಯ ಅಭ್ಯಾಸದ ಒಂದು ಮಾದರಿ ಹೀಗಿದೆ: ಎಳೆ ವಯಸ್ಸಿನಿಂದಲೇ ಮಕ್ಕಳಿಗೆ ಕನ್ನಡದ ಪದಗಳನ್ನು ಶುದ್ಧವಾಗಿ ಬಳಸಲು ಬೋಧನಾ ಕ್ರಮದಲ್ಲಿ ಏನೆಲ್ಲ ಏರ್ಪಾಟು ಇತ್ತು ಎಂಬುದು ಇದರಿಂದ ತಿಳಿಯ ಬಹುದು.

## ಅಭ್ಯಾಸ 5

ಈ ಶಬ್ದಗಳನ್ನು ತಿದ್ದಿ ಹೇಳುವುದು.

ವಂದು, ಯಲೆ, ಯೆಷ್ಟು, ವೂಟ, ವೂರು, ವಂಟೆ, ವೇಶ, ಯಿದು, ಥೂಳಿ, ಭಾವಿ, ದಿವ್ಸ, ಆದ್ರಿಂದ.

ಕೆಳಗೆ ಅಗತ್ಯವಿರುವಲ್ಲಿ ತಿದ್ದಿ ಹೇಳುವುದು.

1. ನಾನು ಸಾಲೆಯಿಂದ **ಮಣೆಗೆ** ಹೋಗುತ್ತೇನೆ.

2. ನಾನು ಊಟ ಮಾಡುವಾಗ **ಮನೆಯ** ಮೇಲೆ **ಕೂಡ್ರುತ್ತೇನೆ.**

3. ನಿನ್ನೆ ನಮ್ಮ ಊರಿಗೆ ಒಂದು ದೊಡ್ಡ **ಆಣೆ** ಬಂದಿತ್ತು.

4. ಒಂದು **ಆನೆಗೆ** ಹನ್ನೆರಡು ಪೈಗಳು.

5. **ಧನ** ಹಾಲು ಕೊಡುತ್ತದೆ.

6. **ಖದಿಯುವವರು** ಖಳ್ಳರು.

ಕೆಳಗೆ ತಪ್ಪಿರುವಲ್ಲಿ ತಿದ್ದಿ ಹೇಳುವುದು.

1. ಆಡುಗಳೂ, ಮರಿಗಳೂ, ಗುಡ್ಡಕ್ಕೆ ಇಳಿದವು.

2. ಅವು ಹುಲ್ಲಿಗೆ ತಿಂದವು.

3. ರಾಮನು ಕೊಡೆಯಲ್ಲಿ ಹಿಡಿದು ಕೊಂಡು ಶಾಲೆಗೆ ಬಂದನು.

4. ಶಾಲೆ ಬಿಟ್ಟ ಬಳಿಕ ಮನೆಯನ್ನು ಹೋದನು.

○ ○ ○ ○

ಭೀಮರಾಯರ ಎರಡು ಕೃತಿಗಳು "ಹಾಸನ ಟೋಪಿ ಅಥವಾ ಹಳೆಯ ಮೆಟ್ರಿಕ್" ಮತ್ತು "ಮುರುಕು ದಂಬೂಕು". ಅವರ ಅಧ್ಯಾಪಕ ವೃತ್ತಿಯ ಮತ್ತು ಸಾರ್ವಜನಿಕ ಕ್ಷೇತ್ರದ ದುಡಿಮೆಯ ಅನುಭವದ ಹಾಗೂ ಉತ್ಕಟ ಕನ್ನಡಾಭಿಮಾನದ ಮುಕ್ತಾ ಫಲಗಳು ಇವು ಎನ್ನಬಹುದು. ಮಾಧ್ಯಮಿಕ ತರಗತಿಯ ಉಪಪಠ್ಯ ಪಾಠಗಳಿಗೆ ಯೋಗ್ಯವಾದ ಪುಸ್ತಕಗಳಾದರೂ ಮೌಲಿಕ ದೃಷ್ಟಿಯಿಂದ ವಿದ್ಯಾರ್ಥಿಗಳಿಗೆ ಮಾತ್ರವಲ್ಲ ಪ್ರೌಢರೂ ಓದಲೇ ಬೇಕಾದ ಪುಸ್ತಕಗಳು ಇವು. 'Tom Brown's School days'ನ ಆಧಾರದಿಂದ ಬರೆದ ಈ ಸೀಳ್ಗತೆ 'ಹಾಸನ ಟೋಪಿ ಅಥವಾ ಹಳೆಯ ಮೆಟ್ರಿಕ್,' ಸರಳವಾದ ಹಾಗೂ ಮಕ್ಕಳಿಗೆ ಒಪ್ಪುವ ಶೈಲಿಯಲ್ಲಿ ಬರೆಯಲ್ಪಟ್ಟಿದೆ.

"ಅದು ಒಂದು ಊರು. ಆ ಊರ ಹೆಸರು ಯಾವುದಾದರೇನು? ಅದು ಒಂದು ಊರು,— ಒಂದೂರು. ಒಂದೂರಲ್ಲಿ ಎಲ್ಲ ಊರುಗಳಲ್ಲಿರುವಂತೆಯೇ, ಪಟೇಲರು, ಶ್ಯಾನುಭೋಗರೂ ಇದ್ದಾರೆ; ಪೋಸ್ಟ್‌ಮಾಸ್ಟರರು ಇದ್ದಾರೆ. ಅಂಗಡಿ, ಮಳಿಗೆ ಮುಂಡ್ಯಗಳು ಇವೆ. ದೇವಸ್ಥಾನವಿದೆ. ಛತ್ರವಿದೆ. ಪ್ರಯಾಣಿಕರ ಬಂಗಲೆ ಇದೆ.ಬ್ರಾಹ್ಮಣರದೊಂದು ಹಾಳು ಬಿದ್ದ ಅಗ್ರಹಾರವೂ, ಆ ಅಗ್ರಹಾರಕ್ಕೊಂದು ಸಣ್ಣ ಕೇರಿಯೂ ಇದೆ. ಇಲ್ಲಿ ಕುರಿಚಲು, ಅಲ್ಲಿ ಹಾಡಿ, ಮುಂದೆ ದಿನ್ನೆ, ದಾಟಿದರೆ ಹಳ್ಳ,

ಹಳ್ಳದ ಮೇಲೆ ಸಂಕ, ಅಲ್ಲಿಂದ ಕೆಳಗೆ ಹೊಲ, ಬಯಲು, ತೋಟ, ರಿಜರ್ವ್ ಕಾಡಿನ ಗಡಿ, ಕಲ್ಲ ರಾಶಿ, ಬಳಿಯಲ್ಲಿಯೇ ಹುಲ್ಲುಗಾವಲು, ಅದರಾಚೆ ಸ್ಮಶಾನ, ಒಂದೆರಡು ಹಾಳು ಬಾವಿಗಳು, ಹಾಗೆ ಹೋಗುತ್ತಾ ಪಟೇಲರ ಚಾವಡಿ, ಬಿಡದನ ಗಳಿಗೊಂದು ದೊಡ್ಡಿ, ಅದರ ಸೆರೆಯಲ್ಲಿ ಊರ ಮಕ್ಕಳಿಗಾಗಿ ಒಂದು ಸಾಲೆ, ಅದರ ಇದಿರಿನಲ್ಲಿ— ಎರಡು ಹೊಲಗಳ ಆಚೆ, ಹೊಲಗೇರಿಯಿಂದೀಚೆ— ಸೇಂದಿ ಅಂಗಡಿ. ಇಷ್ಟೇ ನಮ್ಮ ಒಂದೂರು.''

ಹೀಗೆ ಸುಂದರವಾದ ಸರಳವಾದ ವರ್ಣನೆಯಿಂದ ಕಥೆ ಪ್ರಾರಂಭವಾಗುತ್ತದೆ. ಹಳ್ಳಿ ಶಾಲೆಯಲ್ಲಿ ಲೋವರ್ ಸೆಕೆಂಡರಿ ಪಾಸಾದ ಬಡ ವಿದ್ಯಾರ್ಥಿ ತಮ್ಮುಶಾಸ್ತ್ರಿಯು ಪೇಟೆಯ 'ನೇಟಿವ್ ಹೈಸ್ಕೂಲಿ'ಗೆ ಸೇರುತ್ತಾನೆ. ಮೊದಲ ದಿನವೇ ಇವನು ತುಂಟ ವಿದ್ಯಾರ್ಥಿ ರಾಮರಾಯನ ಕೀಟಲೆಗೆ ಒಳಗಾಗುತ್ತಾನೆ. ಮೊದಲನೆ ವರ್ಷ ಉತ್ತಮ ರೀತಿಯಲ್ಲಿ ತೇರ್ಗಡೆಯಾದ ತಮ್ಮು ವಿಗೆ ಎರಡನೆ ವರ್ಷ ರಾಮಮೂರ್ತಿ ಮತ್ತು ಚಕ್ರಪಾಣಿಯ ಸ್ನೇಹವಾಗುತ್ತದೆ. ರಾಮಮೂರ್ತಿ ಸ್ವಭಾವತಃ ಒಳ್ಳೆಯುವನಾ ದರೂ 'ಚಲ್ಲು' ಸ್ವಭಾವದ ಹುಡುಗ. ಚಕ್ರಪಾಣಿ ಉತ್ತಮ ವಿದ್ಯಾರ್ಥಿ. ರಾಮಮೂರ್ತಿಯ ಪ್ರೇರಣೆಯಿಂದ ತಮ್ಮುವು ಸ್ಪೋರ್ಟ್ಸ್‌ನ ಕಡೆಗೇ ವಿಶೇಷ ಲಕ್ಷ್ಯ ಕೊಡುತ್ತಾನೆ. ಸ್ಪೋರ್ಟ್ಸ್‌ನಲ್ಲಿ ಬಹುಮಾನವೂ ಬರುತ್ತದೆ. ಹಾಗೆ ಬಂದ ಹಣವನ್ನು ತನ್ನ ಖರ್ಚಿಗೆ ಉಪಯೋಗಿಸಿಕೊಂ ಡರೆ ತಂದೆಯ ಹೊರೆ ಕಡಿಮೆಯಾದೀತೆಂದು ತಮ್ಮುವಿನ ಎಣಿಕೆ. ಆದರೆ ರಾಮಮೂರ್ತಿ ಕೇಳಬೇಕಲ್ಲ! ತಮ್ಮುವನ್ನು ಪುಸಲಾಯಿಸಿ ಪ್ರವಾಸಕ್ಕೆ ಕರೆದೊಯ್ದು ಆ ಹಣವನ್ನು ಖರ್ಚು

ಮಾಡಿಸುತ್ತಾನೆ. ಪ್ರವಾಸ ಗಮ್ಮತ್ತಾಗಿತ್ತು. ಆದರೆ ಮರಳಿ
ಬಂದ ಮೇಲೆ ತಮ್ಮನಿಗೆ ನೆಮ್ಮದಿ ಇಲ್ಲ. ಕೈಯಲ್ಲಿ ಹಣವಿಲ್ಲ;
ಹೋಟೆಲಿನ ಬಿಲ್ಲು ಬಾಕಿಯಿದೆ. ಪರೀಕ್ಷೆ ಹತ್ತಿರ ಬಂತು.
ತಯಾರಿ ನಡೆಯಲಿಲ್ಲ. ಹೀಗೆ ತಮ್ಮ ತೊಳಲಾಡುತ್ತಾನೆ. ಗಣಿತ
ಪರೀಕ್ಷೆಯ ದಿನ ತಮ್ಮ ನಕಲು ತೆಗೆಯಲೂ ಪ್ರಯತ್ನಿಸು
ತ್ತಾನೆ. ಪರೀಕ್ಷೆಯಲ್ಲಿ ತಮ್ಮ ಸಾಧಾರಣ ರೀತಿಯಲ್ಲೇ ಪಾಸಾ
ಗುತ್ತಾನೆ.

ಆರನೆಯ ಫಾರ್ಮಿನಲ್ಲಾದರೂ ಚೆನ್ನಾಗಿ ಓದಬೇಕೆಂದು
ತಮ್ಮನ ಆಶೆ. ಆದರೆ ಸ್ನೇಹಿತರು ಕೇಳಬೇಕಲ್ಲ! ಇನ್ಸ್‌ಪೆ
ಕ್ಷನ್ ಮುಂಚಿನ ದಿನ ಸ್ನೇಹಿತರು ತಮ್ಮನನ್ನು ಪುಸಲಾಯಿಸಿ
ನಾಟಕಕ್ಕೆ ಕರೆದುಕೊಂಡು ಹೋದರು. ಹಿಂತಿರುಗುವಾಗ ಇವನ
ಸೈಕಲು ಹೆಡ್ಮಾಸ್ತರರು ಕುಳಿತ ಗಾಡಿಗೇ ತಾಗುತ್ತದೆ. ಹೆಡ್ಮಾ
ಸ್ತರರಿಗೆ ವಿಷಯ ಗೊತ್ತಾಗುತ್ತದೆ. ಇದರಿಂದ ತಮ್ಮನ ಮನ
ಸ್ಸಿಗೆ ನೋವು.

ತಮ್ಮ ಮುಂದೆ ಹಾಸ್ಟೆಲಿನಲ್ಲಿ ವಾಸಿಸುತ್ತಾನೆ. ಅಲ್ಲಿ
ಸ್ನೇಹಿತರೊಡನೆ ತಿರುಗಾಟ, "ಪಟ್ಟಾಂಗ"ಗಳೇ ಆಗುತ್ತವೆ
ಹೊರತು ಓದು ಸಾಗುವುದಿಲ್ಲ. ಪರಿಣಾಮ: ತಮ್ಮ ಫೇಲ್.
ಅವನು ಬೊಂಬಾಯಿಗೆ ಓಡಿಹೋದ. ಅಲ್ಲಿ ಪ್ರಾಮಾಣಿಕ ದುಡಿ
ಮೆಯಿಂದ ತಂದೆಯ ಸಾಲ ತೀರಿಸಿ ಊರಿಗೆ ಬಂದು ನೆಲಸು
ತ್ತಾನೆ.

ಇದಿಷ್ಟು ಕಥಾ ಸಾರಾಂಶ. ಕಥೆಯ ಆರಂಭದಲ್ಲಿ ಹೇಳಿದ
ಒಂದೂರೇ ಶ್ರೀರಾಮಪುರ. ಶ್ರೀ ರಾಮಪುರದ ಶಾಲೆಯ
ವರ್ಧಂತ್ಯುತ್ಸವದಿಂದ ಆರಂಭವಾಗುವ ಈ ಕಥೆ ಅದೇ ಊರಿನ
ನೇಟಿವ್ ಹೈಸ್ಕೂಲಿನ ವರ್ಧಂತ್ಯುತ್ಸವದಿಂದ ಮುಕ್ತಾಯಗೊ

ಳ್ಳುತ್ತದೆ. ಭೀಮರಾಯರು ಈ ಪುಸ್ತಕವನ್ನು ಬರೆದ ಕಾಲ ಇಂಗ್ಲಿಷ್ ವ್ಯಾಸಂಗಕ್ಕೆ ಪ್ರಾಶಸ್ತ್ಯವಿದ್ದ ಕಾಲ. ಕನ್ನಡದಲ್ಲೇನಿದೆ ಎಂಬ ತಿರಸ್ಕಾರ ಭಾವವೂ ಇದ್ದ ಕಾಲ. ಓದಲು ಆಗ ಕನ್ನಡ ಪುಸ್ತಕಗಳು ಒದಗುತ್ತಿದ್ದುದೂ ವಿರಳ. "ಎಳೆಯ ಮಕ್ಕಳಲ್ಲಿ ಬಾಲ್ಯದಿಂದಲೇ ಕನ್ನಡದ ಅಕ್ಕರೆಯು ಬೆಳೆಯುವಂತೆ, ಅವರ ಅಭಿರುಚಿಗೆ ತಕ್ಕ ಪುಸ್ತಕಗಳನ್ನು ಸುಲಭವಾದ ಮಾತುಗಳಲ್ಲಿ ಬರೆಯೋದಿಸಬೇಕು" ಎಂದು ರಾಮರಾಯನ ಬಾಯಲ್ಲಿ ಹೇಳಿಸಿದ ಭೀಮರಾಯರೇ ಅಂದು ಆ ಕೆಲಸಕ್ಕಿಳಿದರು.

ಶ್ರೀರಾಮಪುರದ ಶಾಲಾ ವರ್ಧಂತ್ಯುತ್ಸವ. ಈ ಶಾಲೆಯ ಹಳೇ ವಿದ್ಯಾರ್ಥಿ ತಮ್ಮುಮ್ಮಾವೇ ಇದರ ಅಧ್ಯಕ್ಷ. ತಮ್ಮುಮ್ಮಾವಿನ ವಿದ್ಯಾರ್ಥಿ ಗೆಳೆಯ ರಾಮರಾಯನೇ ಅಂದಿನ ವಿಶೇಷ ಅತಿಥಿ. ರಾಮರಾಯನ ಬಾಯಿಯಿಂದ ಕೃತಿಕಾರರು ನುಡಿಸಿದ ಕನ್ನಡದ ಕಳಕಳಿಯ ಈ ಮಾತುಗಳನ್ನು ಕೇಳಿರಿ.

"ಪ್ರಮುಖ ಭಾಷೆಗಳೊಂದಿಗೆ ಕನ್ನಡವನ್ನು ಹೋಲಿಸುವಾಗ ಕನ್ನಡವು ಹಿಂದುಳಿದಿದೆ ಎಂಬುದು ನಿರ್ವಿವಾದ. ಆದುದರಿಂದ ಅದರ ಉನ್ನತಿಗಾಗಿ ನಾವೆಲ್ಲರೂ ಕೆಲಸ ಮಾಡಬೇಕು. ಆ ಕೆಲಸವನ್ನು ಮಾತ್ರ ನಾನೀಗ ಹೇಳುತ್ತೇನೆ. ಮೊದಲನೆಯದಾಗಿ, ಎಳೆಯ ಮಕ್ಕಳಲ್ಲಿ ಬಾಲ್ಯದಿಂದಲೇ ಕನ್ನಡದ ಅಕ್ಕರೆಯು ಬೆಳೆಯುವಂತೆ, ಅವರ ಅಭಿರುಚಿಗೆ ತಕ್ಕ ಪುಸ್ತಕಗಳನ್ನು ಸುಲಭವಾದ ಮಾತುಗಳಲ್ಲಿ ಬರೆದೋದಿಸಬೇಕು. ಇದನ್ನು ದಕ್ಷಿಣ ಕನ್ನಡದವರಾಗಲೇ ಕೈಗೊಂಡಿರುವರೆಂಬುದನ್ನು ತಿಳಿಸಲು ನಾನು ತುಂಬ ಸಂತೋಷಿಸುತ್ತೇನೆ. ಎರಡನೆಯದಾಗಿ ಧಾರವಾಡ ವಿದ್ಯಾವರ್ಧಕ ಸಂಘವೂ ಬೆಂಗಳೂರಿನ 'ಸಾಹಿತ್ಯ ಪರಿ

ಷತ್ತು' ಒಳ್ಳೊಳ್ಳೆಯ ಕರ್ಣಾಟಕ ಗ್ರಂಥಗಳನ್ನು ಅಣಿಮಾಡಿಟ್ಟಿರುವರೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅದರಲ್ಲಿಯೂ ಬೆಂಗಳೂರಿನ ಕರ್ಣಾಟಕ ಸಂಘವೊಂದು ತನ್ನ 'ಪ್ರಬುದ್ಧ ಕರ್ಣಾಟಕ'ವೆಂಬ ಮಾಸ ಪತ್ರಿಕೆಯ ಮೂಲಕ ಕನ್ನಡಿಗರಿಗೆ ಹೊಸ ರೀತಿಯ ಕನ್ನಡ ಗ್ರಂಥಗಳನ್ನು ಒದಗಿಸಿಕೊಟ್ಟು ಉಪಕರಿಸುತ್ತಿದೆ ಎಂಬ ಅಂಶವನ್ನಾದರೂ ನಾವಿಲ್ಲಿ ಸರ್ವಥಾ ಮರೆಯಬಾರದು........ ಮೂರನೆಯದಾಗಿ ಕರ್ಣಾಟಕದಲ್ಲಿ ಹಿಂದೆ ಆಗಿ ಹೋದ ಉದ್ದಾಮ ಕವಿಗಳ ಸ್ಮಾರಕೋತ್ಸವಗಳನ್ನು ಉಚಿತವಾದ ಕಾಲದಲ್ಲಿ ನೀವೆಲ್ಲರೂ ಹೀಗೆಯೇ ಸಭೆ ಸೇರಿ ಉತ್ಸಾಹಪೂರ್ವಕವಾಗಿ ನಡೆಯಿಸ ಬೇಕು........"

ಕನ್ನಡ ಭಾಷಾ ಸಾಹಿತ್ಯದ ಪ್ರಚಾರವನ್ನು ಏಕೀಕರಣದ ಚಳವಳಿಯನ್ನು ಯಾವ ಮಾಧ್ಯಮದ ಮೂಲಕ ಶ್ರೀ ಭೀಮರಾಯರು ನಡೆಸಿದರು, ಅದರಲ್ಲಿ ಅವರಿಗೆ ಇದ್ದ ಉತ್ಕಟವಾದ ಆಕಾಂಕ್ಷೆ ಎಷ್ಟು ಎಂಬುದಕ್ಕೆ ಮೇಲಿನದೊಂದು ಉದಾಹರಣೆ. ೧೯೩೫ರಲ್ಲಿ ನಮ್ಮ ಜಿಲ್ಲೆಯಲ್ಲಿ ಪ್ರಥಮ ಬಾರಿಗೆ ಸಾಹಿತ್ಯ ಸಮ್ಮೇಳನ ನಡೆಯಿತು. ಶ್ರೀ ತಾತಾಚಾರ್ಯರು ಸಮ್ಮೇಳನಾಧ್ಯಕ್ಷರಾಗಿದ್ದರು. ಶ್ರೀ ಭೀಮರಾಯರು ಈ ಸಮ್ಮೇಳನದ ಪ್ರಮುಖ ಕಾರ್ಯಕರ್ತರಾಗಿದ್ದರು. (ಎಂಬುದನ್ನು ಬೆಂಗಳೂರಲ್ಲಿ ಪರಿಷತ್ತಿನಲ್ಲಿದ್ದ ಮಂಗಳೂರ ಸಾಹಿತ್ಯ ಸಮ್ಮೇಳನದ ಕಾರ್ಯಕರ್ತರ ಪ್ರತಿನಿಧಿಗಳ ಭಾವಚಿತ್ರ ಒಂದರಲ್ಲಿ ನೋಡಿದ್ದೇನೆ) 'ಹಾಸನ ಟೋಪಿ' ಪ್ರಕಟವಾದದ್ದೂ ಸುಮಾರು ಇದೇ ಕಾಲಕ್ಕೆ (೧೯೩೭) ಎಂಬುದನ್ನೂ ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು.

ಅಂದು ಕನ್ನಡದ ಸ್ಥಿತಿ ಹೇಗಿತ್ತು ಎಂಬುದನ್ನು 'ಹಾಸನ ಟೋಪಿ'ಯ ಈ ಕೆಳಗಿನ ಮಾತುಗಳಿಂದಲೂ ಗ್ರಹಿಸಬಹುದು.

ಪುಟ ೬೪ "........ಆದರೆ ಕನ್ನಡಕ್ಕೂ ಒಂದು ಸಭೆ ಏಕೆ? ಎಂದು ಕೆಲವರ ಪಕ್ಷ. ಕನ್ನಡದಲ್ಲಿ ಏನಿದೆ?" ಎಂದು ಅವರಿಗೆ ದೊಡ್ಡ ನಗೆ. ಅದನ್ನು ಕೇಳಿ ಪಂಡಿತರಿಗೂ ಕೊಂಚ ರೇಗಿತು. ಆವರು ನಾಲ್ಕು ಮಾತನಾಡಿದರು. 'ಕನ್ನಡದಲ್ಲಿ ಏನಿದೆಯೋ, ಏನಿಲ್ಲವೋ ನೀವೇನು ಬಲ್ಲಿರಿ? ಕಷ್ಟಪಟ್ಟವರಿಗೆ ಅಲ್ಲವೇ ಗೊತ್ತು?' ವೃಥಾ ಕನ್ನಡವನ್ನು ಏಕೆ ದೂರುತ್ತೀರಿ? ಕನ್ನಡದ ಈಗಿನ ಅವಸ್ಥೆಗೆ ನಿಮ್ಮಂಥ 'ಇಂಗ್ಲಿಷ್' ತಲೆಗೇರಿದ ವಿದ್ಯಾವಂತರೇ ಕಾರಣ' ರೆಂದು ಆವರು ಪ್ರತಿಭಟಿಸಿದರು........"

"ಅಧ್ಯಕ್ಷರು ತಮ್ಮ ಅಂದಿನ ಭಾಷಣದಲ್ಲಿ ಕನ್ನಡ ದೇಶ ಮತ್ತು ಕನ್ನಡ ಭಾಷೆಗಳ ಕುರಿತು ಸಂಕ್ಷೇಪವಾಗಿ ಪ್ರಸ್ತಾಪಿಸಿದರು.... ಈಗ ಹಂಚಿ ಹೋಗಿರುವ ಧಾರವಾಡ, ಮಂಗಳೂರು ಮೈಸೂರು ಸೀಮೆಗಳ ಭಿನ್ನತೆಯಿಂದ ಭಾಷೆಯ ಉನ್ನತಿಗೆ ಎಷ್ಟು ತೊಂದರೆ ಎಂಬುದನ್ನು ವಿವರಿಸಿದರು. ಮೂರು ಪ್ರಾಂತಗಳಲ್ಲಿರುವ ಭಾಷೆಯ ಭೇದವು ಈ ಉನ್ನತಿಗೆ ಕೊಂಚ ತೊಡಕೆಂದರು; ಜನರಿಗೆ ಕನ್ನಡದಲ್ಲಿ ಆದರವು ಸಾಲದೆಂದೂ, ವಿದ್ಯಾರ್ಥಿಗಳಾದರೂ ಕನ್ನಡದ ಮೇಲೆ ಮಮತೆಯನ್ನು ಇಟ್ಟು ಅದರ ಉನ್ನತಿಗಾಗಿ ಕೆಲಸ ಮಾಡಬೇಕೆಂದೂ ಪ್ರಾರ್ಥಿಸಿದರು........'

ಹರಿದು ಹಂಚಿ ಹೋದ ಕನ್ನಡ ನಾಡಿನ—ಮುಖ್ಯವಾಗಿ ನಮ್ಮ ಜಿಲ್ಲೆಯಲ್ಲಿನ ಕನ್ನಡದ ಅಂದಿನ ಸ್ಥಿತಿ–ಶ್ರೀ ರಾಯರ ಮೇಲೆ ಅವು ಉಂಟುಮಾಡಿದ ಪರಿಣಾಮ ಅವರಿಗೆ ನಾಡ ನುಡಿಯ ಮೇಲಿದ್ದ ವಿಶೇಷ ಅಭಿಮಾನ–ಇವು ಮೇಲಿನ ಮಾತುಗಳಿಂದ ವ್ಯಕ್ತವಾಗುತ್ತವೆ.

ಕಾವ್ಯ ರಚನೆಯಲ್ಲೂ ಭೀಮರಾಯರದ್ದು ಪಳಗಿದ ಕೈ. ಗದ್ಯದಲ್ಲಿನಂತೆ ಅವರ ತಿಳಿಹಾಸ್ಯ ಅವರ ಕವಿತೆಗಳಲ್ಲೂ ಸಾವು

ನೋಡ ಬಹುದು. "ಪರೀಕ್ಷೆಯಲ್ಲಿ ಪರಾಜಿತನಾದ ವಿದ್ಯಾರ್ಥಿಯ ಪ್ರಲಾಪ" ಎಂಬ ಹಾಸರ ಪದಗಳ ಧಾಟಿಯ ಚತುಷ್ಪದಿ ಕಾವ್ಯದ ಈ ಸಾಲುಗಳನ್ನು ನೋಡಿ. ಪರೀಕ್ಷೆಯಲ್ಲಿ ಫೇಲಾದ ತಮ್ಮ ಈ ಬೇಸರದಿಂದ ಕನ್ನಡ 'ಸುವಾಸಿನಿ' ಪತ್ರಿಕೆ ತೆರೆದಾಗ ಅವನ ಕಣ್ಣಿಗೆ ಬಿದ್ದ ಕಾವ್ಯ ಇದು.

ಸಾಧ್ಯವಿಲ್ಲವು ಪರೀಕ್ಷೆಯೊಳೆನಗೆ ಜಯವು |
ವಿದ್ಯಾ ಪರೀಕ್ಷಕರಿಗಿಲ್ಲವೈ ದಯೆಯು ||
ಆರು ವರ್ಷಗಳಿಂದ ಪೋಗುವೆನು ನಾನು |
ದೂರ ಗುಡ್ಡಕೆ ಬರಿದೆ ಮಣ್ಣು ತುಂಬಿದೆನು ||
ತೋರಲಿಲ್ಲವು ಪರೀಕ್ಷೆಯೊಳು ಜಯವಿನ್ನು |
ನೀರೊಳಗೆ ಹೋಮ ಗೈದಂತಾದುದೇನು ? || ೧ ||

ನೊಸಲ ಪೊರೆಯಾಯ್ತು ಪಾಠದ ಭಾರ ಚಿಂತೆ, |
ಹಸಿವು ನೀರಡಿಕೆಯಿರದಾವೊಂಟಿಯಂತೆ ||
ಉಸುರೆಂಬ ಜೀವ ಕಾಲದಿ ನಡೆದು ಮುಂತೆ |
ಬಸವಳಿದು ಬರಿದೆ ಸೇರ್ದೆನು ಪರಿಕೆ ಸಂತೆ || ೨ ||

ಆಟಗಳ ಬರಿದೆ ನಾನಾಡದೇ ಬಿಟ್ಟು |
ಪಾಟದಲಿ ಬಯಲಾಗಿ ಪೂರ್ಣ ಮನವಿಟ್ಟು ||
ಮೂಟೆ ಹೊರುವಾ ಎತ್ತಿನೋಲ್ ನಿದ್ದೆಗೆಟ್ಟು |
ಓಟವೋಡಿದೆ ನೋಡಲದು ಕಣ್ಣು ಕಟ್ಟು | || ೩ ||

ಹಲವು ಪುಸ್ತಕಗಳನು ಪರರೊಡನೆ ಬೇಡಿ |
ಕೆಲವನ್ನು ಕೊಂಡೆನೈ ಹಣವನು ಬಿಸಾಡಿ, ||
ಕಲಿತೆ ನಾನೆಲ್ಲವನು ಪೂರ್ಣ ಮನ ಮಾಡಿ, |
ಗೆಲಲಿಲ್ಲವಿದು ಪರೀಕ್ಷೆಯ ಮಂತ್ರವೋಡಿ ! || ೪ ||

"ಹಾಸನ ಟೋಪಿ"ಯಲ್ಲಿ

೦ ೦ ೦ ೦

ಹಾಸನ ಟೋಪಿಯ ಉದ್ದಕ್ಕೂ ಭೀಮರಾಯರ ವಿಡಂಬನೆಯ ಮಾತುಗಳು ಹಾಸ್ಯದ ಚಟಾಕಿಗಳು ಅಲ್ಲಲ್ಲಿ ಎದ್ದು ಕಾಣುತ್ತವೆ. ಐಗಳ ಮಠಗಳು ಹೋಗಿ ಶಾಲೆಗಳು ಬಂದದ್ದನ್ನು ವರ್ಣಿಸುತ್ತಾ ಗ್ರಂಥಕರ್ತರು ಹೇಳಿದ ಮಾತು: 'ಸೂರ್ಯನನ್ನು ನೋಡಿ ಇನ್ನು ಪಾಠ ಆರಂಭಿಸುವುದೂ, ಮಕ್ಕಳನ್ನು ಮನೆಗೆ ಕಳಿಸುವುದೂ ಮುಗಿದು, ಗಡಿಯಾರ ನೋಡಿಯೇ ಸೂರ್ಯನು ಮೂಡಿ ಮುಳುಗುವಂತಾಯಿತು'...."ಗ್ರಾಮಸ್ಥರಲ್ಲಿ ಕೆಲವರು ಜನಿವಾರವಿರುವ ಬ್ರಾಹ್ಮಣರು, ಕೆಲವರು ಜನಿವಾರವಿಲ್ಲದ ಬ್ರಾಹ್ಮಣೇತರರು; ಇನ್ನು ಕೆಲವರು ಅಗತ್ಯ ಕಂಡಾಗ ಮಾತ್ರ ಜನಿವಾರ ಧರಿಸಿ ಬೇಡವಾದಾಗ ಅದನ್ನು ಗೂಟಕ್ಕೆ ತೂಗು ಹಾಕುವ ಇತರ ಬ್ರಾಹ್ಮಣರು" ಎಂದು ಗ್ರಾಮದ ಪರಿಚಯ ಮಾಡಿಸಿಕೊಟ್ಟ ರೀತಿ—ಇವು ಹಾಸ್ಯದ ಹೊನಲುಗಳಾದರೂ, ಸಮಾಜದ ಅಂದಿನ ಸ್ಥಿತಿಯನ್ನು ವ್ಯಂಗ್ಯವಾಗಿ ಹೇಳಿದಂತಿದೆಯಲ್ಲವೆ?

o o o o

'ಹಾಸನ ಟೋಪಿ' ಪ್ರಕಟವಾದ ಕಾಲಕ್ಕೆ ನಾನು ೩ನೇ ಫಾರಂನಲ್ಲಿ ಕಾರ್ಕಳ ಬೋರ್ಡ್ ಹೈಸ್ಕೂಲಿನಲ್ಲಿ ಓದುತ್ತಿದ್ದೆ. ಇದು ನಮಗೆ ಆ ವರ್ಷ ಉಪಪಠ್ಯ ಪುಸ್ತಕವಾಗಿತ್ತು. ಇದನ್ನು ಉಪಪಠ್ಯ ಪುಸ್ತಕವಾಗಿ ಗೊತ್ತುಪಡಿಸಲು ಶ್ರೀ ರಾಯರು ಆಯಾ ಹೈಸ್ಕೂಲುಗಳ ಕನ್ನಡ ಪಂಡಿತರ ಹಿಂದೆ ತಿರುಗಿದ್ದು ಎಷ್ಟು ಬಾರಿಯೋ. ಅವರ ಅಣ್ಣನ ಮಗ ಹುರುಳಿ ಕೃಷ್ಣರಾಯರಲ್ಲಿಗೆ (ಆಗ ವಿದ್ಯಾ ಇಲಾಖೆಯಲ್ಲಿದ್ದನು) ಈ ಕೆಲಸಕ್ಕಾಗಿ ಇವರು ಕಾರ್ಕಳಕ್ಕೆ ಬರುತ್ತಿದ್ದುದು ನನಗೆ ನೆನಪಿದೆ— ವಿದ್ಯಾರ್ಥಿ

ಯಾಗಿ ನಾನು ಮೆಚ್ಚಿದ ಈ ಕೃತಿ—ಇಲ್ಲಿನ ತಮ್ಮ ಶಾಸ್ತ್ರಿಯೊಡನೆ ನನ್ನನ್ನು ನಾನು ಆಗ ಹೋಲಿಸಿಕೊಂಡಿದ್ದೆ. ಬಹುಶಃ ನನಗೆ ಕನ್ನಡ ಕೆಲಸದ ಹುಚ್ಚು ಹಿಡಿಸಿದ ಕೃತಿ ಇದೇ ಎಂಬುದು ನನ್ನ ಗುಮಾನೆ.

० ० ० ०

ಭೀಮರಾಯರ ಇನ್ನೊಂದು ಕಾದಂಬರಿ ಮುರುಕು ದಂಬೂಕು! ಓಹೆನ್ರಿಯ ರಿಪ್‌ವಾನ್‌ವಿಂಕಲ್‌ನ ಕನ್ನಡ ರೂಪಾಂತರವಿದು. ಚಿಕ್ಕ ಮಕ್ಕಳಿಗೆ ಕಥೆಯ ಹೇಳುವ ಶೈಲಿಯಲ್ಲಿ ಆರಂಭವಾದ ಈ ಕಥೆ—ಕಥೆ ಹೇಳುವ ರೀತಿ ರಮ್ಯವಾಗಿದೆ. '....ಹುಡುಗರೆ! ಈಗ ನಿಮಗೂ ಕಥೆ ಹೇಳಬೇಕೆಂದು ಮೂಗಿನ ವರೆಗೆ ಆಸೆ. ಇದಕ್ಕಾಗಿ ನೀವೇನೂ ನನಗೆ ಎಲೆ ಅಡಿಕೆಯನ್ನು, ಕಥೆಯ ಸಂಭಾವನೆಯಾಗಿ ಕೈಗಾಣಿಕೆಯಾಗಿ ಕೊಡಬೇಕಾಗಿಲ್ಲ. ಇನ್ನು ನನ್ನ ಕಥೆ ಕೇಳಿ—ಕಿವಿಗೊಟ್ಟು ಶ್ರದ್ಧೆಯಿಂದ ಕೇಳಿ! ಇದು ದೊಡ್ಡ ಕಥೆ; ಹೇಳಿ ಮುಗಿಸುವುದಕ್ಕೆ ಕೆಲವು ದಿನಗಳೇ ಬೇಕು. ನಿತ್ಯವೂ ಸ್ವಲ್ಪ ಸ್ವಲ್ಪವಾಗಿ ಹೇಳುತ್ತ ಬರುತ್ತೇನೆ. ಆದರೆ ಒಂದು ಶರ್ತ; ನನ್ನ ಕಥೆಯನ್ನೆಲ್ಲ ಆದ್ಯಂತ ಕೇಳದೆ ಮಧ್ಯದಲ್ಲಿ—' ಅಜ್ಜನ ಕಥೆ ಇದೆಯೊ? ಅಸಂಬದ್ಧ ಪ್ರಲಾಪ; ಅಸಂಗತ ಅಬದ್ಧ, ಕಂತೆ; ಸುಳ್ಳು ಪೊಳ್ಳು ಸೃಷ್ಟನೆ; ಊಹನೆ; ಹೇಳಿದ್ದೇ ಹೇಳುವ ಕಿಸುಬಾಯಿ ದಾಸನ ವರ್ಣನೆ.' ಎಂದೆಲ್ಲಿಯಾದರೂ ಹೇಳೀರಾ! ಅಂಥದೇನಾದರೂ ಇದ್ದರೂ 'ಹಾಗುಂಟು, ಹೀಗುಂಟು, ಲಟ್ಟು, ಲಂಗು' ಎಂದೀರಾ! ಆ ರೀತಿ ಆಕ್ಷೇಪಿಸಿದರೆ, ದೂರಿದರೆ ಈ ಕಥೆಯನ್ನು ನಾನು ಅರ್ಧಕ್ಕೇ ನಿಲ್ಲಿಸಿಯೇನು........ನಿಮಗೆ ಕಥೆ ಹೇಳುವ ರೀತಿ, ಅದರಲ್ಲಿ ಬರುವ ಕನ್ನಡದ ಕೆಲಕೆಲವು ಸಂಪ್ರ

ದಾಯ ಶಬ್ದಗಳು, ಗಾದೆಗಳು, ಕನ್ನಡಿಗರ ಕೆಲವು ಮನೆ ಮಾತುಗಳು ಇಷ್ಟಾದರೂ ನಿಮಗೆ ಗೊತ್ತಾಗಲೆಂದು ಈ ಕಥೆ ಹೇಳುತ್ತಿದ್ದೇನೆ—ತಿಳಿಯಿತೇ?"

ಹೀಗೆ ಆರಂಭವಾದ ಈ ಕೃತಿ ಹತ್ತೊಂಭತ್ತನೆಯ ದಿನಕ್ಕೆ—ಒಟ್ಟು ೨೩೬ ಪುಟಗಳಲ್ಲಿ ವಿಸ್ತೃತವಾಗಿದೆ. ಅಲ್ಲಿನ ಕಥಾಭಾಗ ಹೀಗಿದೆ.

"ವಿ. ಚಿತ್ರಮೂರ್ತಿ ತಂದೆಗೆ ಒಬ್ಬನೇ ಮಗ. ಅಜ್ಜಿ ಮತ್ತು ತಾಯಿಯ ಮುದ್ದಿನಿಂದ ಬೆಳೆದವನು. ಉಣ್ಣಲಿಕ್ಕೆ ತಿನ್ನಲಿಕ್ಕೆ ಕೊರತೆಯಿಲ್ಲ. ಆದ್ದರಿಂದ ಹುಡುಗ ಕೋಣನ ಹಾಗೆ ಬೆಳೆಯುತ್ತಾನೆ. ಬುದ್ಧಿ ಮಾತ್ರ ಸೂಕ್ಷ್ಮವಿದೆ. "ಮಧ್ಯಾಹ್ನದ ಹೊತ್ತಿಗೆ ಯಾರಾದರೂ ಬಂದರೆ ಅವರನ್ನು ವಿಚಾರಿಸದೆ 'ಈಗ ಬಂದೆ'ನೆಂದು ಅವರನ್ನು ಹೊರಗೇ ಕುಳ್ಳಿರಿಸಿ, ತಾನು ಒಳಗೆ ಹೋಗಿ ಐದೇ ಕ್ಷಣದಲ್ಲಿ ಊಟ ಮುಗಿಸಿ ಬರುವಷ್ಟು ಗೃಹ ಕೃತ್ಯದ ಸೂಕ್ಷ್ಮ ಬುದ್ಧಿಯು ಈ ಜಾತಕದ ಫಲ" ಎಂದು ಅವನ ಜಾತಕ ನೋಡಿದ ಜೋಯಿಸರೇ ಹೇಳಿದ್ದಾರೆ. ಹದಿನಾಲ್ಕು ವರ್ಷಗಳ ವರೆಗೆ ಉಂಡಾಡಿಯಾಗಿದ್ದ ಮೂರ್ತಿ ಹದಿನೈದನೆ ವರ್ಷಕ್ಕೆ ಐಗಳ ಮಠಕ್ಕೆ ಹೋಗುತ್ತಾನೆ. ಅಲ್ಲಿ ಸಾಕಷ್ಟು ಕೀಟಲೆ ಮಾಡಿದ ಮೇಲೆ ಸ್ವಲ್ಪ ಮಟ್ಟದ ವಿದ್ಯೆ ಅವನ ತಲೆಗೆ ಹತ್ತುತ್ತದೆ. ತಂದೆಗೂ ಗೃಹಕೃತ್ಯದಲ್ಲಿ ಸಹಾಯ ಮಾಡುವ ಬುದ್ಧಿ ಬರುತ್ತದೆ.

ಅಜ್ಜಿಯ ಆಸೆಯಂತೆ ಅವರ ದೂರದ ಸಂಬಂಧಿ, ತಂದೆ ತೀರಿದ ಬೆಳೆದ ಹುಡುಗಿಯೊಡನೆ ಇವನ ಮದುವೆಯಾಗುತ್ತದೆ. ಕೆಲ ದಿನದಲ್ಲಿ ಇವನ ತಂದೆ, ತಾಯಿ, ಅಜ್ಜಿ ಒಬ್ಬೊಬ್ಬರೇ

ಮರಣ ಹೊಂದಿದರು. ಇವನು ಬೇರೆ ದಿಕ್ಕಿಲ್ಲದ ಅತ್ತೆಯನ್ನು ತನ್ನ
ಲ್ಲಿಗೇ ಕರೆಸಿಕೊಂಡನು. ಅದೇ ತಪ್ಪಾಯಿತು. ಗಯ್ಯಾಳಿ ಅತ್ತೆಯ
ಕಾಟ ಮೂರ್ತಿಗೆ ಸಹಿಸದಾಯಿತು. ಅದರಿಂದ ಇವನು ಮನೆಯ
ಹೊರಗಿರುವುದೇ ಹೆಚ್ಚಾಯಿತು. ಊರಿನಲ್ಲಿ ನಡೆಯುವ ಹರಿಕಥೆ
ತಾಳಮದ್ದಳೆ, 'ಪಟ್ಟಾಂಗ'ಗಳಿಗೇ ಇವನ ಹೊತ್ತು ಮೀಸಲಾ
ಯಿತು. ಮುಂದೆ ಇದೂ ಅಸಾಧ್ಯವಾದಾಗ ತನ್ನ ಮನೆಯಲ್ಲಿದ್ದ
'ಮುರುಕು ದಂಬೂಕ'ನ್ನು (ಬಂದೂಕನ್ನು) ಹಿಡಿದು ಊರು
ಬಿಟ್ಟು ಹೋಗುತ್ತಾನೆ.

ಕಾಡಿನ ಬಳಿಯಲ್ಲಿ ಇವನಿಗೊಬ್ಬ ಮುದುಕ ಸಿಕ್ಕಿದನು. ಅವ
ನಲ್ಲಿದ್ದ ಸೆರೆಯನ್ನು ಇವನು ಕುಡಿದ ಕಾರಣ ಇವನಿಗೆ ಚೆನ್ನಾಗಿ
ನಿದ್ದೆ ಬರುತ್ತದೆ. ಒಂದೇ ದಿನದ ನಿದ್ದೆಯೆಂದು ಅವನೆಣಿಸಿದ್ದರೂ
ಅವನಿಗೆ ಬಂದದ್ದು ಐವತ್ತು ವರ್ಷದ ದೀರ್ಘ ನಿದ್ದೆ. ಎದ್ದಾಗ
ಗಡ್ಡ ಬಿಳಿದಾಗಿ ಉದ್ದವಾಗಿದೆ; ದಂಬೂಕಿಗೆ ತುಕ್ಕು ಹಿಡಿದಿದೆ.
ಬಟ್ಟೆ ಹರಿದಿದೆ.

ಮರಳಿ ಅವನು ತನ್ನೂರಿಗೆ ಬಂದಾಗ ಊರು ಗುರುತಿಸ
ಲಾರದಷ್ಟು ಬದಲಾಗಿದೆ. ಮುನಿಸಿಪಾಲಿಟಿ ಇಲೆಕ್ಷನ್, ಕರ್ನಾ
ಟಕ ಸಂಘದ ಸಭೆ, 'ಫಿರಂಗಿ'ಯವರ ಧರ್ಮ ಪ್ರಚಾರ ಮುಂ
ತಾದ್ದನ್ನು ನೋಡುವ ಭಾಗ್ಯ ಮೂರ್ತಿಯದ್ದಾಗುತ್ತದೆ.
ಲೈಸನ್ಸ್ ಇಲ್ಲದ ಕೋವಿಗಾಗಿ ಇವನ ವಿಚಾರಣೆ ನಡೆದಾಗ
ಅಕಸ್ಮಾತ್ತಾಗಿ ತನ್ನ ಮಗನ ಭೇಟಿ ಇವನಿಗಾಗುತ್ತದೆ.

○ ○ ○ ○

ವೃದ್ಧರ ವಿವಾಹ ಅಪೂರ್ವವಲ್ಲ, ಐವತ್ತು ವರ್ಷಗಳ
ವರೆಗೆ ಮಲಗಿ ನಿದ್ರಿಸಿದ ಸಂಗತಿಯೂ ಸೋಜಿಗವಲ್ಲ; ಎಂಬುದಕ್ಕೆ

ಗ್ರಂಥಕರ್ತರು ಅಮೇರಿಕೆಯಲ್ಲಿ ೯೮ ವರ್ಷ ಪ್ರಾಯದ ಮಿ. ಲೇನ್ ಎಂಬವರು ನರ್ಸ್ ಫಾಕ್ಸ್ ಎಂಬ ೪೬ ವರ್ಷದವಳನ್ನು ಮದುವೆಯಾದ ಪತ್ರಿಕಾ ವರದಿಯ ಆ ಅಂಶವನ್ನು – ಸ್ವೀಡನ್ನಿನಲ್ಲಿ ಕುಂಭ ಕರ್ಣನ ತಂಗಿ ಎಂದು ಕರೆಯಿಸಿಕೊಳ್ಳುವ ೮೫ ವಯಸ್ಸಿನ ಓರ್ವ ಮುದುಕಿ ೩೨ ವರ್ಷಗಳ ದೀರ್ಘ ಕಾಲ ನಿದ್ರಿಸಿದ ಪತ್ರಿಕಾ ಸುದ್ದಿಯ ಸಂಗತಿಯನ್ನು ಇಲ್ಲಿ ಉದಾಹರಿಸಿದ್ದಾರೆ.

○ ○ ○ ○

ವಿದ್ಯಾರ್ಥಿಗಳಿಗಾಗಿಯೇ ಬರೆಯಲ್ಪಟ್ಟ ಇವರ ಕೃತಿಗಳಲ್ಲಿ ಕೆಲವೊಮ್ಮೆ ಸಂಭಾಷಣೆಗಳು ಅವಾಸ್ತವವಾಗಿ ಕಂಡು ಬಂದರೂ ಭಾಷೆ ಸುಲಭವಾಗಿರಬೇಕು; ದೋಷಗಳಿರಬಾರದು ಎಂಬ ಬಗ್ಗೆ ಎಚ್ಚರ ವಹಿಸಿದ್ದಾರೆ. ಗಾದೆಗಳೂ ಯಥೇಚ್ಛವಾಗಿ ಬಳಸಲ್ಪಟ್ಟಿವೆ. ಮಕ್ಕಳ ದಶಾವತಾರದ ಆಟ, ಹಾಳು ಶಾಲೆಯ ವರ್ಧಂತ್ಯುತ್ಸವ, ತಾಳಮದ್ದಲೆ ಮುಂತಾದ ಸನ್ನಿವೇಶಗಳ ಮೂಲಕ ಈ ಕೃತಿಯಲ್ಲಿ ಲೇಖಕರು ಗ್ರಾಮ ಜೀವನವನ್ನು ಸೊಗಸಾಗಿ ಚಿತ್ರಿಸಿದ್ದಾರೆ.

ಲೇಖಕರ ವಿಕಟ ಕವಿತ್ವದ ಕೆಲವು ಉದಾಹರಣೆಗಳನ್ನು ಈ ಕೃತಿಯಲ್ಲಿ ನಾವು ನೋಡಬಹುದು. ನಶ್ಯದ ಮಹಿಮೆಯ ಕುರಿತ ಒಂದು ಕವಿತೆಯನ್ನು ಇಲ್ಲಿ ಉದಾಹರಿಸುವೆನು.

(ಮುರುಕು ದಂಬೂಕು, ಪುಟ 179)

( 'ಹಣವೇ ನಿನ್ನಯ ಗುಣ' ಎಂಬಂತೆ )

ನಶ್ಯ ದೇವಿಯ ಗುಣವೆಷ್ಟೆಂದು ಪೇಳಲಿ |
ನಶ್ಯ ಹಾಕದ ಮನುಜ ಕ|ನಿಷ್ಟವೆಂಬುದು ನಿಜ ||ಪಲ್ಲ||

ಅಂಗನೆಯರ ತೆರದಿ ಮಂಗಳವಾಗಿರ್ಪ|
ಕಂಗಳು ಮೂಗನು| ಮಂಗನಂದದಿ ಮಾಳ್ಪೆ ||ಅನುಪಲ್ಲ
ಮೂರು ಕಾಸಿಗೆ ಕೊಂಡು| ಆರು ಮಂದಿಗೆ ಹಂಚಿ|
ಶೂರ ಕರ್ಣನ ದಾನ ಮೀರಿಪರಯ್ಯ
ಭೂರಿ ಭಕ್ತರ ಕಾವ| ಮಾರಿ ನಿನ್ನನು ಮರೆಯೆ|
ಭಾರಿ ಸಂಕಟ ತಪ್ಪದಯ್ಯ, ಕೇಳಯ್ಯ ||೧||

ಂ ಂ ಂ ಂ

"ಬಾನಿನಲ್ಲಿ ಇರುಳು ಮಿಂಚಿದ ಚುಕ್ಕಿಗಳು ಮಾಯವಾ
ಗಿದ್ದುವು; ಮೂಡಲ ಕೆಂಪು ಎಲ್ಲೆಲ್ಲಿಯೂ ಹಸರಿಸಿ ರವಿರಶ್ಮಿಯ
ಮುಂಗುರುತನ್ನು ಸೂಚಿಸುತ್ತಿತ್ತು; ಹಕ್ಕಿಗಳ ಚಿಲಿಪಿಲಿ ಮುಗಿ
ದಿತ್ತು: ಗ್ರಾಮದ ದನ ಕರು ಮೇವಿಗಾಗಿ ಗುಡ್ಡವೇರುತ್ತಿ
ದ್ದುವು. ಆಕಾಶ ದೀಪದಂತೆ ರವಿಮೂಡಿ ಮುಖದೋರಿ ಮೇಲೇರಿ
ಬೆಳಗಲಾರಂಭಿಸಿದ್ದ. ವನವೃಕ್ಷ ರಾಜಗಳ ತುದಿಯ ಮೇಲೆ
ಅವನ ಸುವರ್ಣ ಕಿರಣಗಳು ನಲಿದು ನರ್ತಿಸಿ ನಗುತ್ತಿದ್ದುವು;
ಕೆಳಗಡೆ ಹರಿಯುವ ತೊರೆಯೊಂದು ನೊರೆಸುರಿಯುತ್ತ ಮೊರೆ
ಯುತ್ತ ಮೆರೆಯುತ್ತ ಮಂದಹಾಸದಿಂದ ಮುಂದೆ ಸಾಗು
ತ್ತಿತ್ತು; ಅದರ ಪ್ರವಾಹ ಅಲ್ಲಲ್ಲಿ ಬಂಡೆಗಳ ಮೇಲೇರಿ ಕೆಳಗೆ
ಜಾಗುವಾಗ ತರುಣ ಅರುಣ ಕಿರಣಗಳ ಹೊಂಬಣ್ಣ ಅದರ
ಮೇಲೆ ಬಿದ್ದು ಕಣ್ಮನಗಳನ್ನು ಕೋರಯಿಸುವಂತೆ ಥಳಥಳಿಸು
ತ್ತಿತ್ತು; ದಾರಿಯಲ್ಲಿ ಉದುರಿದ್ದ ಸುರಗಿ ಸಂಪಗೆಳ ಘಮಘಮಿ
ಸುವ ಸುವಾಸನೆಯನ್ನು ತಂಗಾಳಿ ಸೂರೆ ಮಾಡಿ ದಾರಿಗನ
ಮೂಗನ್ನು ಅರಳಿಸುತ್ತಿತ್ತು; ಮನಸ್ಸಿಗೆ ಆನಂದವನ್ನು ಬೀರು
ತ್ತಿತ್ತು; ಹಕ್ಕಿ ಪಕ್ಷಿಗಳು ಗಿಡಮರಗಳ ಮಧ್ಯದಿಂದ ಪ್ರೇಮಗೀತ
ಗಳನ್ನು ಇಂಪಾದ ಮಧುರ ಕಂಠದಿಂದ ಗಾನ ಮಾಡುತ್ತಿದ್ದುವು;

ಎಲ್ಲೆಲ್ಲಿಯೂ ಪ್ರಕೃತಿಯ ಪ್ರಶಾಂತ ಪ್ರವೃತ್ತಿ; ಚೆಲುವಿನ ನಲವಿನ ಗೆಲವು; ವೀಣೆಯ ಮೋಹಕ ವಾಣಿ; ಸೃಷ್ಟಿಯ ಸೊಬಗಿನ ಸೊಗಸೆಲ್ಲ ವಿಶ್ವದ ಸಕಲ ಸಂಪತ್ತಿನ ರಾಶಿಯೆಲ್ಲ ಇಲ್ಲಿಯೇ ಕಲೆತಂತೆ ತೋರುತ್ತಿತ್ತು."

( ಮುರುಕು ದಂಬೂಕು ಪುಟ 167 )

ಶ್ರೀ ಭೀಮರಾಯರ ಗದ್ಯ ಶೈಲಿಗೆ, ವರ್ಣನೆಗಳಿಗೆ ಇದೊಂದು ಉತ್ತಮ ನಿದರ್ಶನ.

o o o o

ಕರ್ಣಾಟಕ ಸಂಘದ ಇತಿಹಾಸ: ಇದು ಹತ್ತೊಂಭತ್ತನೆಯ ದಿನದ ಕಥೆ ಕರ್ಣಾಟಕ ಸಂಘದ ಸ್ಥಾಪಕನು ತನ್ನ ಗೋಳನ್ನು ಒಂದು ಕನ್ನಡಿಗರ ಸಭೆಯಲ್ಲಿ ಹೀಗೆ ತೋಡಿಕೊಳ್ಳುತ್ತಾನೆ. "........ ಹ್ಯಾಗಾದರೂ ಒಂದು ಕರ್ಣಾಟಕ ಸಂಘ ಸ್ಥಾಪನೆಯಾಯಿತು ಅಂತ ಆಯಿತು. ಆದರೆ ಆ ಮೊದಲಿನ ಸಭೆಯಲ್ಲಿಯೇ ಅದಕ್ಕೆ ಮಂಗಳವಾಗಿ ಹೋಯಿತು........ ಈ ಸಭೆಗೆ ಸದಸ್ಯರಾದವರು, ಸೇಕಡಕ್ಕೆ ಸೇಕಡ ಪತ್ರಿಕೆಯಲ್ಲಿ ತಮ್ಮ ಹೆಸರು ಬರುತ್ತದಲ್ಲ ಎಂಬ ಸಂಭ್ರಮಕ್ಕೇ 'ನಾನು' 'ತಾನು' ಅಂತ ಮೇಲೊಡ್ಡಿ ಕೊಂಡು ಬಂದವರು; ೬ ಮಂದಿ ಉಪಾಧ್ಯಕ್ಷರ, ೧೨ ಮಂದಿ ಕಾರ್ಯದರ್ಶಿಗಳ, ೩೬ ಮಂದಿ ಕಾರ್ಯಕಾರಿ ಮಂಡಲದ ಸದಸ್ಯರ ಸ್ಥಾನಗಳಿಗೆ ಮಾಲೆ ಹಾಕಿಸಿ ಕೊಂಡವರು. ಮತ್ತು ಖರ್ಚು ಎಲ್ಲಿ ತಲೆಯ ಮೇಲೆ ಬಿದ್ದು, ಕೈ ಸುಟ್ಟು ಹೋಗುತ್ತದೋ ಎಂದು ಹಿಂದೆ ಸರಿದು 'ಸಭೆಗೆ ಬನ್ನಿ' ಎಂದು ಹೇಳಿಕಳುಹಿಸಿದಾಗ – ಒಂದು ಸಲ ನಾನೇ ಹೋಗಿ ಕೆಲವರನ್ನು ಕರೆದಾಗ, —ಮನೆಯಲ್ಲಿ ಇದ್ದೂ ಇಲ್ಲವೆಂತಲೇ ಹೇಳಿಸಿಕೊಂಡವರು;........ ಹಿತ್ತಿಲ ಕಡೆ ಅರ್ಧ ಮಲೆಯಾಳಿ; ಕೆಲಸದ

ಹೆಂಗಸು ಕೇರಳದವಳು; ಅಡಿಗೆ ಮನೆಯಲ್ಲಿ ಅರ್ಧ ತೆಲುಗು; ಅಡಿಗೆ ಹುಡುಗ ಆಂಧ್ರದೇಶದವ; ನಡುಮನೆಯಲ್ಲಿ ಪೂರಾ ತಮಿಳು; ಮನೆಮಾತು, ಮಾತೃಭಾಷೆ ಅದೇ; ಚಾವಡಿಯಲ್ಲಿ ತುಳು—ಕನ್ನಡ; ಆಳು ಘಟ್ಟದ ಕೆಳಗಿನವ; ಮತ್ತೆ ಬೀದಿಗಿಳಿದರೆ ಇಂಗ್ಲಿಷ್, ಮಧ್ಯೆ ಒಂದೊಂದು ಕುರುಡು ಕನ್ನಡ ಶಬ್ದ. ಇಂಥ ವರನ್ನು ಕಟ್ಟಿಕೊಂಡು ಈ ಸಭೆ ಅಂತ ಮಾಡಿ ಎರಡು ಕೈಯಲ್ಲಿ ತಿಂದೆ." ಅದೇ ಸಭೆಯ ಆ ಊರಿನ ಶಾಲೆಯ ಕನ್ನಡ ಪಂಡಿತರೂ ತನ್ನ ಅಮೋಘವಾದ ಭಾಷಣದಿಂದ ನೆರೆದ ಮಕ್ಕಳಲ್ಲಿ ಕನ್ನಡದ ಬಿತ್ತನ್ನು ಬಿತ್ತಿದರು.

'ಕನ್ನಡದ ಗ್ರಹಚಾರ ಹಿಡಿದ ಅಧ್ಯಕ್ಷರೆ, (ಶಾಲಾ ಮುಖ್ಯೋಪಾಧ್ಯಾಯರು)ದಾಕ್ಷಿಣ್ಯಕ್ಕಾಗಿ ಹೊತ್ತು ಕಳೆಯುವು ದಕ್ಕಾಗಿ ಇತ್ತ ಬಂದ ಮೂರು ಮುಕ್ಕಟೆ ಸಭಿಕರೆ, ಮುಖ್ಯೋಪಾ ಧ್ಯಾಯರ ಮಾತು ಮೀರಲಾರದೆ ಸಭೆಗೆ ಬಂದಿರುವ ಬೆರಳೆಣಿ ಕೆಯ ವಿದ್ಯಾರ್ಥಿಗಳೇ!....ಕನ್ನಡದ ಮೇಲಿನ ಅಗಾಧ ಅನಾದರ ದಿಂದಲೋ ತಿರಸ್ಕಾರ ಬುದ್ಧಿಯಿಂದಲೋ ಈ ದಿನದ ಮುನ್ಸಿ ಪಲ್ ಚುನಾವಣೆಯ ಗಲಭೆಯಿಂದಲೋ ಈ ಸಭೆಗೆ ಹೊರಗಿ ನವರು ಹೆಚ್ಚು ಮಂದಿ ಬರಲಿಲ್ಲವೆಂಬುದು ವಿಷಾದಕರ; ಹೇಗೂ ಇಂದು ಎಳೆಯವರಾದರೂ ಮುಂದೆ ದೇಶದ, ಕನ್ನಡ ನಾಡಿನ ಸತ್ಪ್ರಜೆಗಳಾಗಿ ಬೆಳೆದು ಬಾಳುವವರಲ್ಲಿ ಕೆಲವರಾದ ನೀವಿಲ್ಲಿರು ವುದು ನನಗೆ ಅತಿಶಯವಾದ ಆನಂದವನ್ನು ಉಂಟು ಮಾಡಿದೆ. ಮುಖ್ಯವಾಗಿ ನಿಮ್ಮಲ್ಲಿ ಹಿರಿಯರು ಬಿತ್ತಲು ಯತ್ನಿಸುವ ಈ ಕನ್ನಡದ ಅಭಿಮಾನದ ಬೀಜವು, ಕ್ರಮಶಃ ಮೊಳೆತು, ಸಸಿ ಯಾಗಿ, ಗಿಡವಾಗಿ, ಮರವಾಗಿ, ಹೂ ಬಿಟ್ಟು ಫಲಕೊಡದಿರ ದೆಂದು ನನ್ನ ಅಖಂಡ ವಿಶ್ವಾಸ; ಅಲ್ಲದಿದ್ದರೆ ಈ ಪ್ರಯತ್ನಗಳೆಲ್ಲ

ನಿಮ್ಮ ಔದಾಸೀನ್ಯದಿಂದಲೇ 'ಎಲ್ಲ ಬಣ್ಣ ಮಸಿ ನುಂಗಿತು' ಎಂಬಂತಾದೀತೆಂಬುದು ನೆನಪಿರಲಿ! ಕನ್ನಡದ ಉದ್ಧಾರ ಕಾರ್ಯವೂ ಭವಿಷ್ಯವೂ ವಿದ್ಯಾರ್ಥಿಗಳಾದ ನಿಮ್ಮ ಕೈಯಲ್ಲೇ ಇದೆ ಎಂಬುದು ಸದಾ ನಿಮ್ಮ ಸ್ಮರಣೆಯಲ್ಲಿರಲಿ!...."

ಕನ್ನಡದ ಭಾಷಾ ಐತಿಹ್ಯ, ನಾಡಿನ ಚರಿತ್ರೆ ಈ ಶತಮಾನದ ಆದಿಯಿಂದ ಕನ್ನಡ ಸಾಹಿತ್ಯದ ರಚನೆಯಲ್ಲಿ ತೊಡಗಿದ ಹಿರಿಯ ಸಾಹಿತಿಗಳ ಹೆಸರು ಇವೆಲ್ಲಗಳ ವಿವರಗಳನ್ನು ಹೃದಯಂಗಮವಾಗಿ ಸದ್ರಿ ಕನ್ನಡ ಪಂಡಿತರು ಮಕ್ಕಳಿಗೆ ಸ್ಫೂರ್ತಿಯಿಂದ ಹೇಳಿ ಮಕ್ಕಳನ್ನು ಹುರಿದುಂಬಿಸಿದರು.

o o o o

'ಹಾಸನ ಟೋಪಿ', 'ಮುರುಕು ದಂಬೂಕು' ಇವೆರಡೂ ಸ್ವತಂತ್ರ ಬರೆಹಗಳಲ್ಲದಿದ್ದರೂ ಆಂಗ್ಲ ಕಥೆಯ ವಸ್ತುವನ್ನು ನಮ್ಮ ನೆಲ, ಕೆಲ ಬದುಕುಗಳಿಗೆ ಅಳವಡಿಸಿಕೊಂಡು ನಮ್ಮಲ್ಲಿ ಬಳಕೆಯಲ್ಲಿರುವ ನುಡಿಕಟ್ಟುಗಳನ್ನೇ ಬಳಸಿಕೊಂಡು ಮಕ್ಕಳ ಮನಸ್ಸಿನ ಮಟ್ಟಕ್ಕೆ ಒಪ್ಪುವಂತೆ ಕನ್ನಡಕ್ಕೆ ಶ್ರೀ ಭೀಮರಾಯರು ಭಟ್ಟ ಇಳಿಸಿದ್ದಾರೆ, ಹಲವೆಡೆಗಳಲ್ಲಿ ತಾನೇ ಅವ್ಯಕ್ತವಾಗಿ ಕೃತಿಕಾರರು ಅವತರಿಸಿದ್ದಾರೆ.--- ಈ ಕೃತಿಗಳು ಯಾವ ಕಾಲಕ್ಕೂ ಓದಿಗೆ ಯೋಗ್ಯವಾದುವು. ನಮ್ಮ ಇಂದಿನ ವಿದ್ಯಾರ್ಥಿಗಳಲ್ಲಿ ನಾಡ ನುಡಿಯ ಮೇಲಿನ ಅಭಿಮಾನ ಅರಳಿಸಲು ಯುಕ್ತವಾದವು. ಮತ್ತೆ ಇಂತಹ ಕೃತಿಗಳು ಬೆಳಕಿಗೆ ಬರಬೇಕು ಎಂದೆನ್ನಿಸುತ್ತದೆ.

o o o o

— ೭ —

ಗೋವಿಂದ ಪೈ, ಕಾಮತ್, ಪಂಜೆ, ಮುಳಿಯರಂತೆಯೇ ನಮ್ಮ ಕನ್ನಡ ನಾಡಿನ ಹಿರಿಯರಲ್ಲಿ ಒಬ್ಬರಾಗಿರುವ ಶ್ರೀ ಹುರುಳಿ ಭೀಮರಾಯರು ಹೀಗಿದ್ದರು, ಹೀಗೆಲ್ಲ ಇದ್ದರು ಎಂದು ಹೇಳಲು ನನ್ನ ಮಿತಿಯಲ್ಲಿ ಯತ್ನಿಸಿದ್ದೇನೆ. ನಾನು ಇಲ್ಲಿ ಮಾಡಿರುವುದು ಅವರ ಕೃತಿಗಳ ವಿಮರ್ಶೆ ಅಲ್ಲ, ಅವರ ಕೃತಿಗಳ ಹಾಗೂ ಸಾಧನೆಗಳ ಒಂದು ಇಣುಕು ನೋಟ. ಅವರ ಕೃತಿಗಳಿಂದಲೇ– ಅವರ ಮಾತುಗಳಿಂದಲೇ ಸಂಗ್ರಹಿಸಿ ಭೀಮರಾಯರು ಹೀಗಿದ್ದರು ಎಂದು ಹೇಳಲು ಯತ್ನಿಸಿದ್ದೇನೆ. ಇದು ಸಾಹಿತಿಯ ಬರಹ ಅಲ್ಲ, ಕಲಾಕಾರನ ಚಿತ್ರವಲ್ಲ, ಗೇಯಕಾರನ ಗಾಯನವಲ್ಲ, ಶಿಲ್ಪಿಯ ಮೂರ್ತಿಯೂ ಅಲ್ಲ– ಇದು ಕೇವಲ ಬೀದಿ ಭಾಷಣಕಾರನೋರ್ವನ ಆಡು ಮಾತಿನ ಒಂದು ಪತ್ರಿಕಾ ವರದಿ– ಅಷ್ಟೇ.

"ಭಾರತದ ಭೂಮಿಯಲ್ಲಿ ನಮ್ಮ ಕನ್ನಡ ವಾಙ್ಮಯವೂ, ಇತರ ಸಾಹಿತ್ಯಗಳೊಡನೆ ತಲೆ ಎತ್ತಿ ಓಡಾಡಬೇಕಾದರೆ, ತನ್ನ ಸ್ಥಾನಮಾನ, ಗೌರವ ಪ್ರತಿಷ್ಠೆಗಳನ್ನು ಉಳಿಸಿ ಬೆಳೆಸಬೇಕಾದರೆ, ದೇಶಪ್ರೇಮ, ಭಾಷಾನುರಾಗ, ಸಾಹಿತ್ಯ ಸೇವೆ, ಜನತೆಯ ಉದ್ಧಾರ, ಜ್ಞಾನಪ್ರಸಾರ, ಅಜ್ಞಾನ ನಿರ್ಮೂಲನ ಇವೇ ಮೊದಲಾದ ಉದಾತ್ತ ಆದರ್ಶಗಳೇ ಕನ್ನಡಿಗರ ಮೂಲ ಮಂತ್ರಗಳಾಗಿರಬೇಕಾಗಿವೆ........ ಕನ್ನಡತನವೊಂದೇ ನಿಮ್ಮ ನಿತ್ಯಾಹ್ನಿಕವಾಗಿರಬೇಕು—ಜಪ ತಪ ಧ್ಯಾನವಾಗಿರಬೇಕು, ಕನ್ನಡದ ನುಡಿ ದೇವಿಯೇ ನಿಮ್ಮ ಕುಲದೇವರು, ಮನೆ ದೇವರು; ಆವಳ ಸ್ತೋತ್ರ ಆರಾಧನೆಯೇ

ನಿಮ್ಮ ಪೂಜೆ ಪಾರಾಯಣ; ಹಂಪೆ ಬೇಲೂರುಗಳೇ ನಿಮ್ಮ ಕಾಶಿ ರಾಮೇಶ್ವರ, ತುಂಗಾ ಕಾವೇರಿಗಳೇ ನಿಮ್ಮ ಗಂಗಾ ಯಮುನ; (ಹಂಪಿ) ವಿರೂಪಾಕ್ಷ (ಬೇಲೂರು) ಚೆನ್ನಕೇಶವ ಸ್ವಾಮಿಗಳೇ (ಕಾಶಿ) ವಿಶ್ವನಾಥ (ಒಡ್ಡಿ) ಜಗನ್ನಾಥ ದೇವರು. ರನ್ನ ಪೊನ್ನ ಪಂಪಾದಿ ವರಕವಿಗಳೇ ನಿಮ್ಮ ವಂಶದ, ನಿಮ್ಮ ಗೋತ್ರದ, ನಿಮ್ಮ ಕುಲದ ಮಹಾಮುನಿಗಳು! ಇವಿಷ್ಟನ್ನು ಮರೆಯದಿರಿ; ಅಂದರೆ ನಮ್ಮ ಕನ್ನಡ ನಾಡ, ನುಡಿಯ ಉದ್ಧಾರಕ್ಕೆ ಬಹಳ ಕಾಲ ಹಿಡಿಯದು" (ಮುರುಕು ದಂಬೂಕು)— ಹೀಗೆ ಹೇಳಿದವರು ಶ್ರೀ ಭೀಮರಾಯರು.

ಂ ಂ ಂ ಂ

ಕನ್ನಡದ ಉನ್ನತಿಗಾಗಿ ಈ ಶತಮಾನದ ಆದಿಯಿಂದಲೇ ಕಂಕಣ ಕಟ್ಟಿ ದುಡಿದು, ಕನ್ನಡ ಮಂತ್ರ ಜಪಿಸುತ್ತ, ಕನ್ನಡ ನಾಡು ನುಡಿಗಳಲ್ಲಿ ಅಭಿಮಾನವಿರಿಸಿ ಕನ್ನಡಕ್ಕಾಗಿ ದುಡಿಯಿರಿ; ಕನ್ನಡಕ್ಕಾಗಿ ಮಡಿಯಿರಿ ಎಂಬ ಗಾಯತ್ರೀ ಮಂತ್ರ ಜಪಿಸುತ್ತಾ ಬಾಳಿನುದ್ದಕ್ಕೂ ನಾಡನುಡಿಯ ಬೆಳಸಿಗಾಗಿ ತನ್ನ ದೇಹವನ್ನು ಸವೆಯಿಸಿದ ಶ್ರೀ ಭೀಮರಾಯರು ಕೃತಾರ್ಥರು, ಕೃತಾತ್ಮರು. ಹಿರಿಯರು ನಡೆದ ದಾರಿ ನಮಗೆ ಮುಂದಿನ ಮಾರ್ಗ. ಅವರ ಬದುಕು ನಮಗೆ ಆದರ್ಶ. ಅವರ ಕೃತಿಗಳು ನಮ್ಮನ್ನು ಕತ್ತಲಿಂದ ಬೆಳಕಿಗೆ ಒಯ್ಯುವ ಸೊಡರುಗಳು. ನಾಡು ಶ್ರೀ ಭೀಮರಾಯರಿಗೆ ಋಣಿಯಾಗಿರಬೇಕೆಂದಿಷ್ಟೇ ಹೇಳಿದರೆ ಸಾಕೆ? ನಾವು ಇಂತಹ ಹಿರಿಯರಿಗೆ ನೀಡುವ ಕಾಣಿಕೆ ಏನು? ಭೀಮರಾಯರ ಕೃತಿಗಳು ಮತ್ತೆ ಬೆಳಕಿಗೆ ಬರಬೇಕು, ನಮ್ಮ ಮಕ್ಕಳು ಆ ಕೃತಿಗಳನ್ನು ಓದಬೇಕು, ಮನನ ಮಾಡಬೇಕು. ಭೀಮರಾಯರಿಗೆ

ನೆಚ್ಚಿನವುಗಳಾಗಿದ್ದ ಕಲೆಗಳು ಯಕ್ಷಗಾನ, ನಾಟಕ, ಸಂಗೀತ, ಇವುಗಳನ್ನು ಸಂಪ್ರದಾಯ ಬದ್ಧವಾಗಿ ನಮ್ಮ ನಾಡಿನಲ್ಲಿ ಉಳಿಸಿ ಕೊಂಡು ಬರುವುದೇ ನಾವು ಈ ಹಿರಿಯರಿಗೆ ನೀಡುವ ಇನ್ನೊಂದು ಕಾಣಿಕೆ.

ಂ ಂ ಂ ಂ ಂ

೧೯೭೦ ಆಗಸ್ಟ್ ೪ನೆ ದಿನದ ಪತ್ರಿಕೆಗಳು ಶ್ರೀ ಭೀಮ ರಾಯರ ನಿಧನದ ವಾರ್ತೆಯನ್ನು ಹೊತ್ತು ತಂದವು. ನಾಡಿಗೆ ನಾಡೇ ಈ ಹಿರಿಯ ಜೀವದ ಜ್ಯೋತಿ ನಂದಿದುದಕ್ಕಾಗಿ ಮರು ಗಿತು. ನಾಡಿನ ಎಲ್ಲ ಪತ್ರಿಕೆಗಳೂ ತಮ್ಮ ಹಿರಿಯ ಅಣ್ಣನ ನಿಧನದ ಬಗ್ಗೆ ಸಂತಾಪ ಸೂಚಿಸಿ ಅಗ್ರಲೇಖನಗಳನ್ನು ಬರೆ ದವು. ಬೆಂಗಳೂರಿನ ಒಂದು ಪತ್ರಿಕೆ ತನ್ನ ದುಃಖವನ್ನು ತೋಡಿಕೊಂಡ ಬಗೆ ಹೀಗಿದೆ: "........ಐವತ್ತು ವರ್ಷಗಳ ಕಾಲ 'ಕಂಠೀರವ' ಕನ್ನಡ ವಾರಪತ್ರಿಕೆಯ ಸಂಪಾದಕರಾಗಿ ಭೀಮ ರಾಯರು ಆ ವೃತ್ತಿ ಕ್ಷೇತ್ರದಲ್ಲೊಂದು ನವೀನ ಸಂಪ್ರದಾಯ ವನ್ನೇ ಆಚರಣೆಗೆ ತಂದರು. ಸರಸ ಕನ್ನಡದಲ್ಲಿ ಹಾಸ್ಯರಸ ಬೆರಸಿ, ಸಾರ್ವಜನಿಕ ಸಮಸ್ಯೆಗಳನ್ನು ಕುರಿತು ಬರೆಯುವು ದೊಂದು ಕಲೆಯನ್ನಾಗಿ ಮಾಡಿದರು! ಇಂತಹ 'ಗುಣಾ ಲಂಕೃತ' ಕನ್ನಡ ಪತ್ರಿಕಾ ಸಂಪಾದಕರ ಹೆಸರನ್ನು ಕೇಳಿದವ ರೆಷ್ಟು ಮಂದಿ? ಕೇಳಿದ್ದವರಲ್ಲಿ ಅವರನ್ನು ಕಂಡಿದ್ದವರಲ್ಲಿ, ಅವರನ್ನು ಗೌರವದಿಂದ ಕಂಡು ಸಂಭಾವಿಸಿದವರೆಷ್ಟು ಮಂದಿ? ೮೫ ವರ್ಷಗಳ ವೃದ್ಧ ಹುರುಳಿ ಭೀಮರಾಯರು "ಮಬ್ಬಿನಲ್ಲೇ ಇದ್ದುಕೊಂಡು ತಾವು ಹುಟ್ಟಿದ ನಾಡಿಗೆ, ತಾವಾಡುವ ನುಡಿಗೆ, ಸೇವೆ ಸಲ್ಲಿಸಿ 'ಮಬ್ಬಿ'ನಲ್ಲೇ ಮಾಯವಾದರು. ಯಾರು ಕೈ

ಬಿಟ್ಟರೂ ಪರಮಾತ್ಮ ಅವರ ಕೈ ಬಿಡುವನೇನು? ಖಂಡಿತ ವಾಗಿಯೂ ಇಲ್ಲ. ಕನ್ನಡನಾಡು ಹುರುಳಿ ಭೀಮರಾಯರ ಸೇವೆಯ ವೈವಿಧ್ಯ ವಿಸ್ತಾರಗಳನ್ನು ಇನ್ನು ಮುಂದಾದರೂ ತಿಳಿದುಕೊಳ್ಳಬೇಕಾಗಿದೆ.''............

ಂ ಂ ಂ ಂ

ಮಂಗಳೂರು ಕನ್ನಡ ಸಂಘದಲ್ಲಿ ಡಾ| ಶಿವರಾಮ ಕಾರಂತರು ನುಡಿದ ಮಾತುಗಳನ್ನೇ ಇಲ್ಲಿ ಉದ್ಧರಿಸಿ ವಿರಮಿಸುವೆ.

''ಶ್ರೀ ಹುರುಳಿ ಭೀಮರಾಯರು ಹೆಚ್ಚಿನ ಸಾಹಿತ್ಯ ಕೃತಿಗಳನ್ನು ರಚಿಸದಿದ್ದರೂ ಕನ್ನಡ ನಾಡಿನ ಪತ್ರಿಕೋದ್ಯಮದಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ಒಂದು ಸ್ಥಾನ ದೊರಕಿಸಲು ಹೆಚ್ಚಿನ ಶ್ರಮ ವಹಿಸಿ ದುಡಿದು ಅದರಲ್ಲಿ ಸಾರ್ಥಕತೆಯನ್ನು ಕಂಡಿದ್ದಾರೆ. ಅವರ ಜೀವನ ನಮ್ಮ ಈಗಿನ ಯುವಕ ಪತ್ರಿಕೋದ್ಯಮಿಗಳಿಗೆ ಮಾರ್ಗದರ್ಶಕವಾಗಿವೆ. **ದಕ್ಷಿಣ ಕನ್ನಡ ಜಿಲ್ಲೆ ಮೂಕವಲ್ಲ**ವೆಂದು ತೋರಿಸಿಕೊಟ್ಟ ಶ್ರೀ ಹುರುಳಿಯವರ ಸ್ಮರಣೆ ಮಾಡುವ ಅವಕಾಶ ಕಲ್ಪಿಸುವುದು ಅತ್ಯಂತ ಅಪೇಕ್ಷಣೀಯ.''

# ನವೋದಯ
# ಪ್ರಚಾರ ಪುಸ್ತಕ ಮಾಲೆ

**ಅಚ್ಚಾದುವು:**

ಕಲಾವಿದ ಕೃಷ್ಣ ಹೆಬ್ಬಾರರು
ಬೇಂದ್ರೆ
ಕಾರ್ಲ್ ಮಾರ್ಕ್ಸ್
ಶಿವರಾಮ ಕಾರಂತ
ಶ್ರೀ ಪು. ತಿ. ನರಸಿಂಹಾಚಾರ್ಯರು
ಟಿ. ಎಸ್. ಈಲಿಯಟ್
ಮಾಸ್ತಿ ವೆಂಕಟೇಶ ಅಯ್ಯಂಗಾರ್
ಕಡೆಂಗೋಡ್ಲು ಶಂಕರ ಭಟ್ಟರು
ಶ್ರೀರಂಗ
ಅ. ನ. ಕೃಷ್ಣರಾಯರು
ಬದುಕುವ ದಾರಿ
ಶ್ರೀ ಕೃಷ್ಣ ದೌತ್ಯ
ಶ್ರೀ ಪುರಂದರ ದಾಸರು
ಸೇಡಿಯಾಪು ಕೃಷ್ಣ ಭಟ್ಟರು
ಮುದ್ದಣ
ಗೋವಿಂದ ಪೈ ಕಾವ್ಯಗಳು
ವಿ. ಸೀ.
ಹುರುಳಿ ಭೀಮರಾಯರು

**ಅಚ್ಚಿನಲ್ಲಿ:**

ಉಗ್ರಾಣ ಮಂಗೇಶರಾಯರು
ಕನ್ನಡ ಕಟ್ಟಿದವರು
ಮುಳಿಯ ತಿಮ್ಮಪ್ಪಯ್ಯ
ಎಸ್. ವೆಂಕಟರಾಜ
ಪಂಜೆ ಮಂಗೇಶರಾಯರು
ಕೈಯಾರ ಕಿಞ್ಞಣ್ಣ ರೈ

---

ನವಯುಗ ಪ್ರೆಸ್, ಉಡುಪಿ.